## ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 31 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 09.06.2020

**ಇವರಿಂದ**
ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ (ಬೀಳಗಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2105ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ (ಬೀಳಗಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2105ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಡನೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ–5)

Rcvd
09/06/2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2105
ಸದಸ್ಯರ ಹೆಸರು : ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ (ಬೀಳಗಿ)
ಉತ್ತರಿಸುವ ದಿನಾಂಕ : 17.03.2020
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷ್ಣಾ ಮೇಲ್ದಂಡೆ ಯೋಜನೆ ಅನುಷ್ಠಾನಕ್ಕಾಗಿ ಹೊಸದಾಗಿ ನಿರ್ಮಿಸುತ್ತಿರುವ 20 ಪುನರ್ ವಸತಿ ಮತ್ತು ಪುನರ್ ನಿರ್ಮಾಣ ಕೇಂದ್ರಗಳಿಗಾಗಿ ಎಷ್ಟು ಎಕರೆ ಜಮೀನುಗಳನ್ನು ಭೂಸ್ವಾಧೀನ ಪಡಿಸಿಕೊಳ್ಳಲಾಗಿದೆ; ಅವುಗಳು ಯಾವ ಹಂತದಲ್ಲಿವೆ: | ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರಲ್ಲಿ ಆಲಮಟ್ಟಿ ಜಲಾಶಯದ ನೀರಿನ ಸಂಗ್ರಹಣೆ ಮಟ್ಟ ಆರ್.ಎಲ್. 519.60ಮೀ. ನಿಂದ 524.256ಮೀ.ಗೆ ಎತ್ತರಿಸುವುದರಿಂದ ಹಿನ್ನೀರಿನಲ್ಲಿ ಒಟ್ಟು 20 ಗ್ರಾಮಗಳು ಮುಳುಗಡೆಯಾಗುತ್ತಿದ್ದು, ಸದರಿ ಗ್ರಾಮಗಳ ಪುನರ್ ವಸತಿ ಕೇಂದ್ರಗಳ ನಿರ್ಮಾಣಕ್ಕಾಗಿ ಒಟ್ಟು 4880ಎ-24ಗುಂ ಭೂಸ್ವಾಧೀನಪಡಿಸಿಕೊಳ್ಳಲು ಉದ್ದೇಶಿಸಲಾಗಿದೆ.<br><br>ಭೂಸ್ವಾಧೀನತೆಯ ಪ್ರಕ್ರಿಯೆಯ ವಿವಿಧ ಹಂತದ ವಿವರಗಳು ಈ ಕೆಳಗಿನಂತಿವೆ: |
| ಆ) | ಉಳಿದ ಗ್ರಾಮಗಳಿಗೆ ಯಾವ ಕಾಲಮಿತಿಯಲ್ಲಿ ಭೂಸ್ವಾಧೀನ ಪ್ರಕ್ರಿಯೆಯನ್ನು ಪೂರ್ಣಗೊಳಿಸಲಾಗುವುದು; | (ಕೆಳಗಿನ ಕೋಷ್ಟಕ ನೋಡಿ) |

| ವಿವರ | ಎ-ಗುಂ. |
|---|---|
| ಐತೀರ್ಪು ಅನುಮೋದನೆಯಾದ ಕ್ಷೇತ್ರ | 1743-09 |
| ಐತೀರ್ಪು ಹಂತ | 51-05 |
| ನ್ಯಾಯಾಲಯದ ತಡೆಯಾಜ್ಞೆ | 629-29 |
| ಪ್ರಸ್ತಾವನೆ ಹಂತ | 2455-01 |
| ಒಟ್ಟು | **4879-04** |

ಮುಳುಗಡೆಯಾಗುವ 20 ಗ್ರಾಮಗಳ ಪುನರ್ ವಸತಿ ಕೇಂದ್ರಗಳಲ್ಲಿ 9 ಗ್ರಾಮಗಳ ಪುನರ್ ವಸತಿಗಾಗಿ 1743 ಎಕರೆ 09 ಗುಂಟೆ ಭೂಸ್ವಾಧೀನ ಪಡಿಸಿಕೊಳ್ಳಲಾಗಿದೆ. 51 ಎಕರೆ 05 ಗುಂಟೆ ಐತೀರ್ಪು ಹಂತದಲ್ಲಿದ್ದು, 112 ಎಕರೆ 22 ಗುಂಟೆ ಕ್ಷೇತ್ರಕ್ಕೆ ನ್ಯಾಯಾಲಯದ ತಡೆಯಾಜ್ಞೆ ಇರುತ್ತದೆ. ಬಾಕಿ ಉಳಿದ ಗ್ರಾಮಗಳ ಪೈಕಿ 3 ಗ್ರಾಮಗಳು ಭೂಸ್ವಾಧೀನ ಪ್ರಕ್ರಿಯೆಗೆ ನ್ಯಾಯಾಲಯ ತಡೆಯಾಜ್ಞೆ ಇರುತ್ತದೆ. 8 ಗ್ರಾಮಗಳು ಪ್ರಸ್ತಾವನೆ ಹಂತದಲ್ಲಿರುತ್ತವೆ.

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಇ | ಯಾವ ಯಾವ ಗ್ರಾಮಗಳು ಸದರಿ ಭೂಸ್ವಾಧೀನ ವ್ಯಾಪ್ತಿಯಲ್ಲಿವೆ; (ಗ್ರಾಮವಾರು ಸಂಪೂರ್ಣ ವಿವರ ನೀಡುವುದು) | 20 ಗ್ರಾಮಗಳ ಸ್ಥಳಾಂತರಕ್ಕಾಗಿ ಪುನರ್ವಸತಿ ಕೇಂದ್ರಗಳನ್ನು ನಿರ್ಮಿಸಲು ಗುರುತಿಸಿರುವ ಜಮೀನುಗಳ ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಲಾಗಿದೆ. |
| ಈ | ಭೂಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ಪರಿಹಾರ ಒದಗಿಸಲಾಗಿದೆಯೇ; ಇಲ್ಲದಿದ್ದಲ್ಲಿ ಯಾವ ಕಾಲಮಿತಿಯೊಳಗೆ ಸಂತ್ರಸ್ತರಿಗೆ ಪರಿಹಾರ ನೀಡಲಾಗುವುದು; | ಭೂಸ್ವಾಧೀನಪಡಿಸಿಕೊಂಡ ಜಮೀನಿಗೆ ಪರಿಹಾರ ಧನ ನೀಡಲಾಗಿದೆ. |

| ಉ | ಭೂಸ್ವಾಧೀನ ಪಡಿಸಿಕೊಂಡ ಪುನರ್ ವಸತಿ ಕೇಂದ್ರಗಳಲ್ಲಿ ಅಭಿವೃದ್ಧಿ ಕಾರ್ಯಗಳು ಪ್ರಾರಂಭವಾಗಿವೆಯೆ; ಹಾಗಿದ್ದಲ್ಲಿ ಅವುಗಳು ಯಾವ ಹಂತದಲ್ಲಿವೆ? (ಪುನರ್ ವಸತಿ ಕೇಂದ್ರವಾರು ಅವುಗಳ ಸಂಪೂರ್ಣ ವಿವರ ನೀಡುವುದು) | ಮುಳುಗಡೆ ಹೊಂದುವ ಗ್ರಾಮಗಳ ಸ್ಥಳಾಂತರಕ್ಕಾಗಿ ಜಮೀನುಗಳನ್ನು ಗುರುತಿಸಿದ್ದು, ಭೂಸ್ವಾಧೀನಪಡಿಸಿಕೊಂಡ ಜಮೀನುಗಳಲ್ಲಿ ನಿವೇಶನ ರಚನೆ, ರಸ್ತೆ ಕಾರ್ಯ, ಚರಂಡಿ, ಕಟ್ಟಡಗಳ ನಿರ್ಮಾಣ ಕಾರ್ಯ ಪ್ರಗತಿಯಲ್ಲಿದೆ ಹಾಗೂ ಕೆಲವೊಂದು ಜಮೀನುಗಳಲ್ಲಿ ನಿವೇಶನ ರಚನೆಗೆ ಟೆಂಡರ್ ಕರೆಯಲಾಗಿದೆ. ಪುನರ್ವಸತಿ ಕೇಂದ್ರಗಳಿಗಾಗಿ ಗುರುತಿಸಿದ ಜಮೀನುಗಳಿಗೆ ತಡೆಯಾಜ್ಞೆಯಿರುತ್ತದೆ ಹಾಗೂ ಅಸಿಂಧುವಾಗಿರುತ್ತವೆ. ವಿವರಗಳನ್ನು ಅನುಬಂಧ–2ರಲ್ಲಿ ಲಗತ್ತಿಸಲಾಗಿದೆ. |
|---|---|---|

ಸಂಖ್ಯೆ: ಜಸಂಇ 31 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

ಅನುಬಂಧ-1

## 20 ಗ್ರಾಮ ಸ್ಥಳಾಂತರಕ್ಕಾಗಿ ಪುನರ್ವಸತಿ ಕೇಂದ್ರ ನಿರ್ಮಾಣದ ಜಮೀನು ಭೂಸ್ವಾಧೀನ ಪ್ರಗತಿ ವಿವರ

| ಕ್ರ. ಸಂ | ಮುಳುಗಡೆ ಗ್ರಾಮಗಳ ಹೆಸರು | ತಾಲೂಕ | ಪುನರ್ವಸತಿ ಕೇಂದ್ರಕ್ಕಾಗಿ ಆಯ್ಕೆಯಾದ ಗ್ರಾಮದ ಹೆಸರು | ಭೂಸ್ವಾಧೀನ ಪಡಿಸ ಬೇಕಾದ ಕ್ಷೇತ್ರ | ಈಗಾಗಲೇ ಐತೀರ್ಪು ಹೊರಡಿ ಸಲಾದ ಕ್ಷೇತ್ರ | ಬಾಕಿ ಉಳಿದ ಕ್ಷೇತ್ರ | ಪ್ರಸ್ತುತ ಹಂತ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಅಂಕಲಗಿ | ಬಾಗಲಕೋಟೆ | ಖಜ್ಜಿಡೋಣಿ | 99-00 | 99-00 | 0 | ದಿ. 18-5-18 ರಂದು ಐತೀರ್ಪು ಮಾಡಲಾಗಿದೆ. |
| | | | ಖಜ್ಜಿಡೋಣಿ | 25-39 | 0 | 25-39 | ಐತೀರ್ಪು ಹಂತದಲ್ಲಿದೆ. |
| 2 | ಶಿರಬೂರ | ವಿಜಯಪುರ | ಮಹಾಲ ಬಗಾಯತ | 102-01 | 102-01 | 0 | ದಿ. 09-2-18 ರಂದು ಐತೀರ್ಪು ಮಾಡಲಾಗಿದೆ. |
| 3 | ಚಿಕ್ಕಗಲಗಲಿ | ವಿಜಯಪುರ | ಮಹಾಲ ಬಗಾಯತ | 161-29 | 161-29 | 0 | ದಿ. 20-2-18 ರಂದು ಐತೀರ್ಪು ಮಾಡಲಾಗಿದೆ. |
| | ಚಿಕ್ಕಗಲಗಲಿ& ಶಿರಬೂರ | | | 13-21 | 0 | 13-21 | ಐತೀರ್ಪು ಹಂತದಲ್ಲಿದೆ. |
| | | | | 7-00 | 0 | 7-00 | ಐತೀರ್ಪು ಹಂತದಲ್ಲಿದೆ. |
| | | | ಮಹಾಲ ಬಗಾಯತ (ಹೆಚ್ಚುವರಿ ಕ್ಷೇತ್ರ) | 42-19 | 42-19 | 0 | ದಿ. 20-2-18 ರಂದು ಐತೀರ್ಪು ಮಾಡಲಾಗಿದೆ. |
| | ಚಿಕ್ಕಗಲಗಲಿ& ಶಿರಬೂರ | ವಿಜಯಪುರ | ಜುಂಜರಕೊಪ್ಪ | 171-32 | 171-32 | 0 | ದಿ. 20-2-18 ರಂದು ಐತೀರ್ಪು ಮಾಡಲಾಗಿದೆ. |
| | | | ಜುಂಜರಕೊಪ್ಪ (ಹೆಚ್ಚುವರಿ ಕ್ಷೇತ್ರ) | 4-25 | 0 | 4-25 | ಐತೀರ್ಪು ಹಂತದಲ್ಲಿದೆ. |
| 4 | ಕುಂದರಗಿ | ಬೀಳಗಿ | ಕುಂದರಗಿ | 348-05 | 348-05 | 0 | ದಿ. 23-1-17 ರಂದು ಐತೀರ್ಪು ಮಾಡಲಾಗಿದೆ. |
| 5 | ಬಾವಲತ್ತಿ | ಬೀಳಗಿ | ಬಾವಲತ್ತಿ & ಕೋವಳ್ಳಿ | 150-00 | 150-00 | 0 | ದಿ. 23-1-17 ರಂದು ಐತೀರ್ಪು ಮಾಡಲಾಗಿದೆ. |
| 6 | ಕೊಪ್ಪ ಎಸ್.ಕೆ. | ಬೀಳಗಿ | ಹಲಗಲಿ | 170-29 | 170-29 | 0 | ದಿ.16-6-16 ರಂದು ಐತೀರ್ಪು ಮಾಡಲಾಗಿದೆ. |
| 7 | ಚಿಕ್ಕೂರ | ಮುಧೋಳ | ಲೋಕಾಪೂರ | 217-23 | 217-23 | 0 | ದಿ.8-6-17 ರಂದು ಐತೀರ್ಪು ಮಾಡಲಾಗಿದೆ. |
| 8 | ಮಾಚಕನೂರ | ಮುಧೋಳ | ಜುಂಜರಕೊಪ್ಪ & ವಜ್ರಮಟ್ಟಿ | 225-26 | 225-26 | 0 | ದಿ. 03-2-17 ರಂದು ಐತೀರ್ಪು ಮಾಡಲಾಗಿದೆ. |
| 9 | ಸನಾಳ | ಜಮಖಂಡಿ | ಸನಾಳ | 166-24 | 54-02 | 112-22 | 54ಎ2ಗುಂ. ದಿ. 10-2-17 ರಂದು ಐತೀರ್ಪು ಮಾಡಲಾ ಗಿದ್ದು, ಉಳಿದ ಕ್ಷೇತ್ರಕ್ಕೆ ಭೂಮಾಲೀಕರು ನ್ಯಾಯಾಲಯದಿಂದ ತಡೆಯಾಜ್ಞೆ ತಂದಿದ್ದಾರೆ |
| 10 | ಕಾತರಕಿ | ಬೀಳಗಿ | ಕಾತರಕಿ | 197-04 | 0 | 197-04 | ಕಲಂ 11(1) ಹೊರಡಿ ಸಲಾಗಿದ್ದು, ನ್ಯಾಯಾಲಯ ದಲ್ಲಿ ತಡೆ ಆಜ್ಞೆ ಇರುವುದು. |
| 11 | ಹಿರೇಸಂಶಿ | ಬಾಗಲಕೋಟೆ | ಗೋವಿಂದಕೊಪ್ಪ | 105-39 | 0 | 105-39 | ಕಲಂ 11(1) ಹೊರಡಿಸಲಾಗಿದ್ದು, ನ್ಯಾಯಾಲಯದಲ್ಲಿ ತಡೆ ಆಜ್ಞೆ ಇರುವುದು. |

| ಕ್ರ. ಸಂ | ಮುಳುಗಡೆ ಗ್ರಾಮಗಳ ಹೆಸರು | ತಾಲೂಕ | ಪುನರ್ವಸತಿ ಕೇಂದ್ರಕ್ಕಾಗಿ ಆಯ್ಕೆಯಾದ ಗ್ರಾಮದ ಹೆಸರು | ಭೂಸ್ವಾಧೀನ ಪಡಿಸ ಬೇಕಾದ ಕ್ಷೇತ್ರ | ಈಗಾಗಲೇ ಪ್ರತೀರ್ಮ ಹೊರಡಿ ಸಲಾದ ಕ್ಷೇತ್ರ | ಬಾಕಿ ಉಳಿದ ಕ್ಷೇತ್ರ | ಪ್ರಸ್ತುತ ಹಂತ |
|---|---|---|---|---|---|---|---|
| 12 | ಗೋವಿಂದಕೊಪ್ಪ | ಬಾಗಲಕೋಟೆ | ಗೋವಿನಕೊಪ್ಪ ತುಳಸಿಗೇರಿ | 96-04 | 0 | 96-04 | ಕಲಂ 11(1) ಹೊರಡಿಸಲಾಗಿದ್ದು, ನ್ಯಾಯಾಲಯದಲ್ಲಿ ತಡೆ ಆಜ್ಞೆ ಇರುವುದು. |
| 13 | ಊದಗಟ್ಟಿ | ಬಾಗಲಕೋಟೆ | ಲೋಕಾಪೂರ | 118-00 | 0 | 118-00 | ಭೂ ಮಾಲೀಕರಿಂದ ತಕರಾರು ಇರುವುದರಿಂದ ಅಸಿಂಧುವಾಗಿದೆ. |
| 14 | ವಂದಾಲ | ಬಸವನ ಬಾಗೇವಾಡಿ | ವಂದಾಲ & ಹುಣಶ್ಯಾಳ | 526-06 | 0 | 526-06 | ಅಸಿಂಧುವಾಗಿದ್ದು, ಮರು ಪ್ರಸ್ತಾವನೆ ತಯಾರಿಸಲಾಗುತ್ತಿದೆ. |
| 15 | ಬುದ್ನಿ ಬಿ.ಕೆ. | ಮುಧೋಳ | ಬುದ್ನಿ ಬಿ.ಕೆ. & ಅಂತಾಪೂರ | 54-20<br>39-08 | 0 | 54-20<br>39-08 | ಅಸಿಂಧುವಾಗಿದ್ದು, ಮರು ಪ್ರಸ್ತಾವನೆ ತಯಾರಿಸಲಾಗುತ್ತಿದೆ. |
| 16 | ಬಂಟನೂರ | ಮುಧೋಳ | ಲೋಕಾಪೂರ & ಚೌಡಾಪೂರ | 391-31 | 0 | 391-31 | ಅಸಿಂಧುವಾಗಿದ್ದು, ಮರು ಪ್ರಸ್ತಾವನೆ ತಯಾರಿಸಲಾಗುತ್ತಿದೆ. |
| 17 | ಆಲಗುಂಡಿ | ಮುಧೋಳ | ಆಲಗುಂಡಿ & ಮುಂಬಾರಕೊಪ್ಪ | 216-21 | 0 | 216-21 | ಅಸಿಂಧುವಾಗಿದ್ದು, ಮರು ಪ್ರಸ್ತಾವನೆ ತಯಾರಿಸಲಾಗುತ್ತಿದೆ. |
| 18 | ಹಿರೇಪಡಸಲಗಿ | ಜಮಖಂಡಿ | ಸಾವಳಗಿ, ಮದರಖಂಡಿ & ತೊದಲಬಾಗಿ | 650-24 | 0 | 650-24 | ಅಸಿಂಧುವಾಗಿದ್ದು, ಮರು ಪ್ರಸ್ತಾವನೆ ತಯಾರಿಸಲಾಗುತ್ತಿದೆ |
| 19 | ಕುಂಬಾರಹಳ್ಳ | ಜಮಖಂಡಿ | ಜಮಖಂಡಿ | 341-31 | 0 | 341-31 | ಅಸಿಂಧುವಾಗಿದ್ದು, ಮರು ಪ್ರಸ್ತಾವನೆ ತಯಾರಿಸಲಾಗುತ್ತಿದೆ. |
| 20 | ಗದ್ದನಕೇರಿ | ಬಾಗಲಕೋಟೆ | ಗದ್ದನಕೇರಿ | 230-00 | 0 | 230-00 | ಎಫ್.ಆರ್.ಎಲ್. 524.256 ಮೀಟರಡಿ ಬರುವುದಿಲ್ಲವೆಂದು ಕುರಿತು ಪರಿಶೀಲನಾ ಹಂತದಲ್ಲಿದೆ. |
| | ಒಟ್ಟು | | | 4879-04 | 1743-09 | 3135-35 | |

ಅನುಬಂಧ – 2

ಕೃ.ಮೇ.ಯೋ ಹಂತ–3 ರಲ್ಲಿ ಪುನರ್ವಸತಿ ಕೇಂದ್ರಗಳಲ್ಲಿಯ ಅಭಿವೃದ್ಧಿ ಕಾರ್ಯಗಳ ವಿವರ.

| ಕ್ರ.ಸಂ. | ಮುಳುಗಡೆ ಗ್ರಾಮಗಳ ಹೆಸರು | ಪುನರ್ವಸತಿ ಕೇಂದ್ರಕ್ಕಾಗಿ ಆಯ್ಕೆಯಾದ ಗ್ರಾಮದ ಹೆಸರು | ಭೂಸ್ವಾಧೀನ ಪ್ರಗತಿ | ಷರಾ |
|---|---|---|---|---|
| 1 | 2 | 3 | 4 | 5 |
| 1 | ಹಿರೇಸಂಶಿ | ಗೋವಿಂದಕೊಪ್ಪ | ತಡೆಯಾಜ್ಞೆ ಇದೆ | – |
| 2 | ಅಂಕಲಗಿ | ಬಜ್ಜಿಡೋಣಿ | ಐತೀರ್ಪು ಮಂಜೂರಾಗಿದೆ | ಇನ್ನು 28 ಎಕರೆ ಜಮೀನು ಭೂಸ್ವಾಧೀನಪಡಿಸಿಕೊಳ್ಳಬೇಕಾಗಿದ್ದು, ನಿವೇಶನ ರಚನೆ ಪ್ರಾರಂಭಿಸಿರುವುದಿಲ್ಲ. |
| 3 | ಗೋವಿಂದಕೊಪ್ಪ | ಗೋವಿನಕೊಪ್ಪ & ತುಳಸಿಗೇರಿ | ತಡೆಯಾಜ್ಞೆ ಇದೆ | – |
| 4 | ಉದಗಟ್ಟಿ | ಲೋಕಾಪೂರ | ತಕರಾರು | – |
| 5 | ಗದ್ದನಕೇರಿ | ಗದ್ದನಕೇರಿ | ಮುಳುಗಡೆ ವ್ಯಾಪ್ತಿಯಲ್ಲಿ ಬರುವುದಿಲ್ಲ | – |
| 6 | ಶಿರಬೂರ | ಮಹಾಲಬಾಗಾಯತ | ಐತೀರ್ಪು ಮಂಜೂರಾಗಿದೆ | ನಿವೇಶನ ರಚನೆ ರಸ್ತೆ ಕಾರ್ಯ ಪೂರ್ಣಗೊಂಡಿದ್ದು ಬದಿ ಚರಂಡಿ, ಕಟ್ಟಡಗಳ ನಿರ್ಮಾಣ ಕಾರ್ಯ ಪ್ರಗತಿಯಲ್ಲಿದೆ. |
| 7 | ಚಿಕ್ಕಗಲಗಲಿ | ಮಹಾಲಬಾಗಾಯತ | ಐತೀರ್ಪು ಮಂಜೂರಾಗಿದೆ | ಟೆಂಡರ್ ಕರೆದು ನಿವೇಶನ ರಚಿಸ ಬೇಕಾಗಿದೆ |
| | ಚಿಕ್ಕಗಲಗಲಿ & ಶಿರಬೂರ | ಝುಂಜುರಕೊಪ್ಪ | ಐತೀರ್ಪು ಮಂಜೂರಾಗಿದೆ | ನಿವೇಶನ ರಚನೆ ಕಾರ್ಯ ಪ್ರಗತಿಯಲ್ಲಿದೆ |
| 8 | ವಂದಾಲ | ವಂದಾಲ & ಹುಣಶ್ಯಾಳ | ಅಸಿಂಧುವಾಗಿದೆ | – |
| 9 | ಕುಂದರಗಿ | ಕುಂದರಗಿ | ಐತೀರ್ಪು ಮಂಜೂರಾಗಿದೆ | – |
| 10 | ಬಾವಲತ್ತಿ | ಬಾವಲತ್ತಿ & ಕೊವಳ್ಳಿ | ಐತೀರ್ಪು ಮಂಜೂರಾಗಿದೆ | ವಿನ್ಯಾಸ ನಕ್ಷೆ ರಚಿಸಿದೆ |
| 11 | ಕಾತರಕಿ | ಕಾತರಕಿ | ತಡೆಯಾಜ್ಞೆಇದೆ | – |

| ಕ್ರ.ಸಂ. | ಮುಳುಗಡೆ ಗ್ರಾಮಗಳ ಹೆಸರು | ಪುನರ್ವಸತಿ ಕೇಂದ್ರಕ್ಕಾಗಿ ಅಯ್ಕೆಯಾದ ಗ್ರಾಮದ ಹೆಸರು | ಭೂಸ್ವಾಧೀನ ಪ್ರಗತಿ | ಷರಾ |
|---|---|---|---|---|
| 12 | ಕೊಪ್ಪಎಸ್.ಕೆ. | ಹಲಗಲಿ | ಐತೀರ್ಪು ಮಂಜೂರಾಗಿದೆ | – |
| 13 | ಬುದ್ನಿ ಬಿ.ಕೆ. | ಬುದ್ನಿ ಬಿ ಕೆ & ಅಂತಾಪೂರ | ಅಸಿಂಧುವಾಗಿದೆ | – |
| 14 | ಚಿಕ್ಕೂರ | ಲೋಕಾಪೂರ | ಐತೀರ್ಪು ಮಂಜೂರಾಗಿದೆ | ವಿನ್ಯಾಸ ನಕ್ಷೆ ರಚಿಸಿದ್ದು, ಬಾಗಲಕೋಟೆ ಕುಡಚಿ ರೇಲ್ವೆ ಮಾರ್ಗ ಪುನರ್ವಸತಿ ಕೇಂದ್ರದಲ್ಲಿ ಸಾಗುವುದರಿಂದ ವಿನ್ಯಾಸ & ನಕ್ಷೆ ಮಾರ್ಪಾಡು ಮಾಡಬೇಕಾಗಿದೆ. |
| 15 | ಮಾಚಕನೂರ | ಝುಂಜುರಕೊಪ್ಪ & ವಜ್ರಮಟ್ಟಿ | ಐತೀರ್ಪು ಮಂಜೂರಾಗಿದೆ | – |
| 16 | ಬಂಟನೂರ | ಲೋಕಾಪೂರ & ಚೌಡಾಪೂರ | ಅಸಿಂಧುವಾಗಿದೆ | – |
| 17 | ಆಲಗುಂಡಿ | ಆಲಗುಂಡಿ & ಝುಂಜುರಕೊಪ್ಪ | ಅಸಿಂಧುವಾಗಿದೆ | – |
| 18 | ಸನಾಳ | ಸನಾಳ | ತಡೆಯಾಜ್ಞೆಇದೆ | – |
| 19 | ಹಿರೇಪಡಸಲಗಿ | ಸಾವಳಗಿ, ಮದರಖಂಡಿ & ತೊದಲಬಾಗಿ | ಅಸಿಂಧುವಾಗಿದೆ | – |
| 20 | ಕುಂಬಾರಹಳ್ಳ | ಜಮಖಂಡಿ | ಅಸಿಂಧುವಾಗಿದೆ | – |

**ಕರ್ನಾಟಕ ಸರ್ಕಾರ**

ಸಂಖ್ಯೆ: ಜಸಂಇ 32 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 09.06.2020

**ಇವರಿಂದ**
ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಆನಂದ್ ಸಿದ್ದು (ಜಮಖಂಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2198ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2198ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಡನೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ-5

Recd
09/06/2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2198
ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ)
ಉತ್ತರಿಸುವ ದಿನಾಂಕ : 17.03.2020
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷ್ಣಾ ನದಿಯ ಆಲಮಟ್ಟಿಯ ಅಣೆಕಟ್ಟಿನ ಎತ್ತರವನ್ನು 524ಕ್ಕೆ ಎತ್ತರಿಸಿದರೆ ಜಮಖಂಡಿ ಮತಕ್ಷೇತ್ರದ ಶ್ರಮಬಿಂದು ಸಾಗರ (ಬ್ಯಾರೇಜ್) ಮುಳುಗಡೆಯಾಗುವ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆಯೆ; | ಬಂದಿದೆ |
| ಆ) | ಬಂದಿದ್ದಲ್ಲಿ, ಶ್ರಮಬಿಂದು ಸಾಗರ (ಬ್ಯಾರೇಜ್) ಮುಳುಗಡೆಯಾಗದಂತೆ ಎತ್ತರಿಸುವ ಬಗ್ಗೆ ಸರ್ಕಾರವು ಯಾವ ಕ್ರಮ ಕೈಗೊಳ್ಳುವುದು; | ಜಮಖಂಡಿ ಮತ ಕ್ಷೇತ್ರದ ಶ್ರಮಬಿಂದು ಸಾಗರ (ಬ್ಯಾರೇಜ್) ಅನ್ನು FRL ಮಟ್ಟ 516.00 ಮೀಟರಿಗೆ 1988–89ನೇ ಸಾಲಿನಲ್ಲಿ ಆಲಮಟ್ಟಿ ಅಣೆಕಟ್ಟಿನ ಮೇಲ್ಭಾಗದಲ್ಲಿ ನಿರ್ಮಾಣ ಮಾಡಲಾಗಿದೆ. |
| ಇ | ಈ ಬಗ್ಗೆ ಕ್ರಮ ಕೈಗೊಂಡಿದ್ದಲ್ಲಿ ಸದರಿ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಿ ಪೂರ್ಣಗೊಳಿಸಲಾಗುವುದು? | ಆಲಮಟ್ಟಿ ಜಲಾಶಯದಡಿ 2002ನೇ ಸಾಲಿನಿಂದ ಸದ್ಯದ FRL ಮಟ್ಟ 519.60 ಮೀ.ಗೆ ನೀರು ಸಂಗ್ರಹಿಸಲಾಗುತ್ತಿದ್ದು, ಈ ಮಟ್ಟಕ್ಕೆ (519.60 ಮೀ.) ಶ್ರಮಬಿಂದು ಸಾಗರ (ಬ್ಯಾರೇಜ್) ಮುಳುಗಡೆಯಾಗುತ್ತದೆ.<br><br>ಕೃಷ್ಣಾ ಜಲ ವಿವಾದ ನ್ಯಾಯಾಧಿಕರಣ–2 ತೀರ್ಪಿನ ಮೇರೆಗೆ ಕೃಮೇ.ಯೋ ಹಂತ–3 ರಡಿ ಹಂಚಿಕೆಯಾದ 130.00 ಟಿಎಂಸಿ ನೀರಿನ ಬಳಕೆಗಾಗಿ ಆಲಮಟ್ಟಿ ಜಲಾಶಯದಡಿ ನೀರಿನ ಸಂಗ್ರಹಣೆ ಮಟ್ಟ ಆರ್.ಎಲ್. 519.60 ಮೀ. ರಿಂದ ಆರ್.ಎಲ್. 524.256 ಮೀ. ವರೆಗೆ ಎತ್ತರಿಸುವುದು ಒಳಗೊಂಡಿರುತ್ತದೆ.<br><br>ಆಲಮಟ್ಟಿ ಜಲಾಶಯದಡಿ ಆರ್.ಎಲ್. 516.00 ಮೀ. ಕ್ಕಿಂತ ನೀರಿನ ಮಟ್ಟ ಇಳಿಕೆಯಾದಂತೆ ಶ್ರಮಬಿಂದು ಬ್ಯಾರೇಜ್‌ನ FRL 516.00 ಮೀ ಮಟ್ಟಕ್ಕೆ ಅವಶ್ಯಕ ಕುಡಿಯುವ ನೀರನ್ನು ಸಂಗ್ರಹಿಸಿಟ್ಟುಕೊಳ್ಳಲು ಅವಕಾಶ ಕಲ್ಪಿಸಿದೆ. |

ಸಂಖ್ಯೆ: ಜಸಂಇ 32 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2198
ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ)
ಉತ್ತರಿಸುವ ದಿನಾಂಕ : 17.03.2020
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷ್ಣಾ ನದಿಯ ಆಲಮಟ್ಟಿಯ ಅಣೆಕಟ್ಟಿನ ಎತ್ತರವನ್ನು 524ಕ್ಕೆ ಎತ್ತರಿಸಿದರೆ ಜಮಖಂಡಿ ಮತಕ್ಷೇತ್ರದ ಶ್ರಮಬಿಂದು ಸಾಗರ (ಬ್ಯಾರೇಜ್) ಮುಳುಗಡೆಯಾಗುವ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಬಂದಿದ್ದಲ್ಲಿ, ಶ್ರಮಬಿಂದು ಸಾಗರ (ಬ್ಯಾರೇಜ್) ಮುಳುಗಡೆಯಾಗದಂತೆ ಎತ್ತರಿಸುವ ಬಗ್ಗೆ ಸರ್ಕಾರವು ಯಾವ ಕ್ರಮ ಕೈಗೊಳ್ಳುವುದು; | ಜಮಖಂಡಿ ಮತ ಕ್ಷೇತ್ರದ ಶ್ರಮಬಿಂದು ಸಾಗರ (ಬ್ಯಾರೇಜ್) ಅನ್ನು FRL ಮಟ್ಟ 516.00 ಮೀಟರಿಗೆ 1988-89ನೇ ಸಾಲಿನಲ್ಲಿ ಆಲಮಟ್ಟಿ ಅಣೆಕಟ್ಟಿನ ಮೇಲ್ಭಾಗದಲ್ಲಿ ನಿರ್ಮಾಣ ಮಾಡಲಾಗಿದೆ. |
| ಇ | ಈ ಬಗ್ಗೆ ಕ್ರಮ ಕೈಗೊಂಡಿದ್ದಲ್ಲಿ ಸದರಿ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಿ ಪೂರ್ಣಗೊಳಿಸಲಾಗುವುದು? | ಆಲಮಟ್ಟಿ ಜಲಾಶಯದಡಿ 2002ನೇ ಸಾಲಿನಿಂದ ಸದ್ಯದ FRL ಮಟ್ಟ 519.60 ಮೀ.ಗೆ ನೀರು ಸಂಗ್ರಹಿಸಲಾಗುತ್ತಿದ್ದು, ಈ ಮಟ್ಟಕ್ಕೆ (519.60 ಮೀ.) ಶ್ರಮಬಿಂದು ಸಾಗರ (ಬ್ಯಾರೇಜ್) ಮುಳುಗಡೆಯಾಗುತ್ತದೆ.<br><br>ಕೃಷ್ಣಾ ಜಲ ವಿವಾದ ನ್ಯಾಯಾಧಿಕರಣ-2 ತೀರ್ಪಿನ ಮೇರೆಗೆ ಕೃಮೇ.ಯೋ ಹಂತ-3 ರಡಿ ಹಂಚಿಕೆಯಾದ 130.00 ಟಿಎಂಸಿ ನೀರಿನ ಬಳಕೆಗಾಗಿ ಆಲಮಟ್ಟಿ ಜಲಾಶಯದಡಿ ನೀರಿನ ಸಂಗ್ರಹಣೆ ಮಟ್ಟ ಆರ್.ಎಲ್. 519.60 ಮೀ. ರಿಂದ ಆರ್.ಎಲ್. 524.256 ಮೀ. ವರೆಗೆ ಎತ್ತರಿಸುವುದು ಒಳಗೊಂಡಿರುತ್ತದೆ.<br><br>ಆಲಮಟ್ಟಿ ಜಲಾಶಯದಡಿ ಆರ್.ಎಲ್. 516.00 ಮೀ. ಕ್ಕಿಂತ ನೀರಿನ ಮಟ್ಟ ಇಳಿಕೆಯಾದಂತೆ ಶ್ರಮಬಿಂದು ಬ್ಯಾರೇಜ್‌ನ FRL 516.00 ಮೀ ಮಟ್ಟಕ್ಕೆ ಅವಶ್ಯಕ ಕುಡಿಯುವ ನೀರನ್ನು ಸಂಗ್ರಹಿಸಿಟ್ಟುಕೊಳ್ಳಲು ಅವಕಾಶ ಕಲ್ಪಿಸಿದೆ. |

ಸಂಖ್ಯೆ: ಜಸಂಇ 32 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಜಸಂಇ 34 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 09.06.2020

**ಇವರಿಂದ**
ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2146ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಶಿವಾನಂದ ಪಾಟೀಲ(ಬಸವನಬಾಗೇವಾಡಿ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:2146ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಡನೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ-5)

Recd
09/06/2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2146
ಸದಸ್ಯರ ಹೆಸರು : ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ)
ಉತ್ತರಿಸುವ ದಿನಾಂಕ : 17.03.2020
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಮುಳವಾಡ ಏತ ನೀರಾವರಿ ಯೋಜನೆಯ ವಿಜಯಪುರ ಮುಖ್ಯ ಕಾಲುವೆಯ ಸರಪಳಿ 0.56 ಕಿ.ಮೀ.ರಲ್ಲಿ ಕೂಡಗಿ ಗ್ರಾಮದ ಹತ್ತಿರ ರೈಲ್ವೆ ಮಾರ್ಗದ ಕೆಳಗೆ ಕಾಲುವೆ ಜಾಲ ನಿರ್ಮಿಸುವ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗಿದೆ; | ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರಡಿಯ ಮುಳವಾಡ ಏತ ನೀರಾವರಿ ಯೋಜನೆಯಡಿ ಬಿಜಾಪುರ ಮುಖ್ಯ ಕಾಲುವೆ ಕಿ.ಮೀ. 0.56 ರಲ್ಲಿಯ ರೈಲ್ವೆ ಕ್ರಾಸಿಂಗ್ ಬಳಿ ಕೆಳಗೆ ಕಾಲುವೆ ನಿರ್ಮಾಣ ಕಾಮಗಾರಿಯನ್ನು ರೈಲ್ವೆ ಇಲಾಖೆಯಿಂದ ಗುತ್ತಿಗೆ ಆಧಾರದ ಮೇಲೆ ದಿನಾಂಕ 02.01.2017ರಂದು ಪ್ರಾರಂಭಿಸಲಾಗಿದೆ. |
| ಆ) | ಕಾಮಗಾರಿಯಲ್ಲಿ ಇದುವರೆಗೂ ಸಾಧಿಸಿರುವ ಪ್ರಗತಿ ಏನು; | ರೈಲ್ವೆ ಇಲಾಖೆಯ ಅನುಮೋದಿತ ವಿನ್ಯಾಸದ ಮೇರೆಗೆ ಕಾಲುವೆ ಕೆಳಭಾಗದಿಂದ (Downstream side) 3 ಬಾಕ್ಸ್‌ಗಳನ್ನು ತಳ್ಳುವ ಸಂದರ್ಭದಲ್ಲಿ ಗಟ್ಟಿಕಲ್ಲು ಬಂದಿರುವುದರಿಂದ ಒಟ್ಟು 45 ಮೀ. ಪೈಕಿ 38 ಮೀ. ವರೆಗೆ ಮಾತ್ರ ಬಾಕ್ಸ್‌ಗಳನ್ನು ತಳ್ಳುವ ಕಾರ್ಯವು ಜುಲೈ-2018 ರಂದು ಪೂರ್ಣಗೊಂಡಿದೆ.<br><br>ಬಾಕಿಯಿರುವ 7 ಮೀ. ತಳ್ಳುವ ಕಾರ್ಯದ ಸಲುವಾಗಿ ಹಾಗೂ ಮೇಲ್ಭಾಗದ ಹೆಚ್ಚುವರಿ 3 ಬಾಕ್ಸ್‌ಗಳನ್ನು ನಿರ್ಮಾಣ ಮಾಡಿ ತಳ್ಳುವ ಕಾರ್ಯ ವಿಧಾನದ ಪದ್ಧತಿಯನ್ನು ಬದಲಾಯಿಸಿ ಪರಿಷ್ಕೃತ ಕಾರ್ಯ ವಿಧಾನ ಅಳವಡಿಸಿ ಮೇಲ್ಭಾಗದಿಂದ (Upstream side) 3 ಬಾಕ್ಸ್‌ಗಳನ್ನು ತಳ್ಳುವ ಕಾರ್ಯವನ್ನು ಕೈಗೊಳ್ಳಲು ರೈಲ್ವೆ ಇಲಾಖೆಯು ಹೆಚ್ಚುವರಿ ಠೇವಣಿ ಹಾಗೂ ಪರಿಷ್ಕೃತ ವಿನ್ಯಾಸ ಮತ್ತು ನಕ್ಷೆ ಅನುಮೋದನೆಗಾಗಿ ದಿನಾಂಕ:24.07.2019 ರಲ್ಲಿ ಕೋರಿದ್ದು, ತದನಂತರ ಮೇಲ್ಭಾಗದ 2 ಬಾಕ್ಸ್‌ಗಳನ್ನು ನಿರ್ಮಾಣ ಕಾಮಗಾರಿ ನವಂಬರ್-2019 ರಲ್ಲಿ ಪ್ರಾರಂಭಿಸಿದೆ.<br><br>3 ಬಾಕ್ಸ್‌ಗಳ ಪೈಕಿ 2 ಬಾಕ್ಸ್‌ಗಳ ಕಾಸ್ಟಿಂಗ್ ನವಂಬರ್-2019 ರಿಂದ ಜನವರಿ-2020ರಲ್ಲಿ ನಿರ್ಮಿಸಿದ್ದು, ಎರಡರಲ್ಲಿ 1 ಬಾಕ್ಸ್‌ನ್ನು ದಿನಾಂಕ:24.02.2020ರಿಂದ ತಳ್ಳಲು ಪ್ರಾರಂಭಿಸಿದ್ದು, ದಿನಾಂಕ: 12.03.2020ರ ವರೆಗೆ 19.00 ಮೀ. ತಳ್ಳಲಾಗಿರುತ್ತದೆ ಹಾಗೂ ಬಾಕಿ ಉಳಿದಿರುವ 16 ಮೀ. ತಳ್ಳುವ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| ಇ | ಕಾಮಗಾರಿಯ ಗುತ್ತಿಗೆಯಲ್ಲಿ ಆಗಿರುವ ಒಡಂಬಡಿಕೆಯಂತೆ ಯಾವಾಗ ಪೂರ್ಣವಾಗಬೇಕಾಗಿತ್ತು; ಪ್ರಸ್ತುತ ಬಾಕಿ ಉಳಿದಿರುವ ಕೆಲಸಗಳೇನು; | ಗುತ್ತಿಗೆ ಒಡಂಬಡಿಕೆ ಪ್ರಕಾರ ಕಾಮಗಾರಿಯು ದಿನಾಂಕ 01.09.2018 ಕ್ಕೆ ಪೂರ್ಣಗೊಳ್ಳಬೇಕಾಗಿತ್ತು.<br><br>ಪ್ರಸ್ತುತ ರೈಲ್ವೆ ಲೈನಿನ ಮೇಲ್ಭಾಗದಲ್ಲಿ 3 ಬಾಕ್ಸ್‌ಗಳ ಪೈಕಿ 1 ಬಾಕ್ಸ್‌ನ್ನು ಭಾಗಶಃ ತಳ್ಳುವ, 2ನೇ ಬಾಕ್ಸ್‌ನ್ನು ಪೂರ್ಣವಾಗಿ ತಳ್ಳುವ ಹಾಗೂ 3ನೇ ಬಾಕ್ಸ್‌ನ್ನು ಕಾಸ್ಟಿಂಗ್ ಮಾಡುವ ಕೆಲಸ ಬಾಕಿ ಇರುತ್ತದೆ. |

| ಈ | ಸದರಿ ಕಾಮಗಾರಿ ಪೂರ್ಣಗೊಳ್ಳಲು ತುಂಬಾ ವಿಳಂಬವಾಗುತ್ತಿರುವುದಕ್ಕೆ ಕಾರಣವೇನು; | ಬಾಕ್ಸ್ ತಳ್ಳುವ ಸಮಯದಲ್ಲಿ ಗಟ್ಟಿಕಲ್ಲು ಬಂದಿರುವುದರಿಂದ ಬ್ರೇಕರ್ ಮುಖಾಂತರ ಗಟ್ಟಿಕಲ್ಲನ್ನು ಒಡೆದು ಬಾಕ್ಸ್‌ನ್ನು ತಳ್ಳಲಾಗುತ್ತಿರುವುದರಿಂದ ಕಾಮಗಾರಿಯನ್ನು ಪೂರ್ಣಗೊಳಿಸುವಲ್ಲಿ ವಿಳಂಬವಾಗಿರುತ್ತದೆ. |
|---|---|---|
| ಉ | ಕಾಮಗಾರಿಯನ್ನು ಪೂರ್ಣಗೊಳಿಸಲು ಕೈಗೊಂಡಿರುವ ಕ್ರಮಗಳೇನು ಹಾಗೂ ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು? | 3 ಬಾಕ್ಸ್‌ಗಳ ಪೈಕಿ 2 ಬಾಕ್ಸ್‌ಗಳನ್ನು ದಿನಾಂಕ: 15.04.2020ರ ಒಳಗೆ ಪೂರ್ಣಗೊಳಿಸಿ, ಬಿಜಾಪುರ ಮುಖ್ಯ ಕಾಲುವೆ ಜಾಲದಡಿ ಬರುವ ಕೆರೆಗಳನ್ನು ತುಂಬಿಸುವ ಸಲುವಾಗಿ ಕಾಲುವೆಗಳಿಗೆ ನೀರನ್ನು ಹರಿಸಲು ಯೋಜಿಸಲಾಗಿದ್ದು, 3 ನೇ ಬಾಕ್ಸ್‌ನ್ನು Casting & Pushing ಕಾರ್ಯವನ್ನು ಆದ್ಯತೆಯ ಮೇರೆಗೆ ಯುದ್ಧೋಪಾದಿಯಲ್ಲಿ ಕೈಗೊಳ್ಳಲು ರೈಲ್ವೆ ಇಲಾಖೆಯನ್ನು ಕೋರಲಾಗಿದೆ. |

ಸಂಖ್ಯೆ: ಜಸಂಇ 34 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಜಸಂಇ 30 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 09.06.2020

**ಇವರಿಂದ**
ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀಹೂಲಗೇರಿ ಡಿ.ಎಸ್ (ಲಿಂಗಸುಗೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2173ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀಹೂಲಗೇರಿ ಡಿ.ಎಸ್ (ಲಿಂಗಸುಗೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2173ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಡನೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ-5

Recvd
09/06/2020

ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 2173 |
| ಸದಸ್ಯರ ಹೆಸರು | : ಶ್ರೀ ಹೂಲಗೇರಿ ಡಿ.ಎಸ್ (ಲಿಂಗಸುಗೂರು) |
| ಉತ್ತರಿಸುವ ದಿನಾಂಕ | : 17.03.2020 |
| ಉತ್ತರಿಸುವ ಸಚಿವರು | : ಜಲಸಂಪನ್ಮೂಲ ಸಚಿವರು |

<table>
<tr><th>ಕ್ರ ಸಂ:</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ನಂದವಾಡಗಿ ಏತ ನೀರಾವರಿ ಯೋಜನೆಯ ಹಂತ-2 ಕಾಮಗಾರಿಗೆ ಮಂಜೂರಾಗಿರುವ ಅನುದಾನವೆಷ್ಟು; ಯಾವ ಯಾವ ಏಜೆನ್ಸಿಗಳಿಗೆ ಈ ಕಾಮಗಾರಿ ನೀಡಲಾಗಿದೆ ಹಾಗೂ ಎಂದಿನಿಂದ ಈ ಕಾಮಗಾರಿ ಪ್ರಾರಂಭಿಸಲಾಗುವುದು;</td><td>ದಿನಾಂಕ:01.03.2014 ರ ಸರ್ಕಾರದ ಆದೇಶದನ್ವಯ ನಂದವಾಡಗಿ ಏತ ನೀರಾವರಿ ಯೋಜನೆಯಡಿ ಒಟ್ಟಾರೆ 36,100 ಹೆಕ್ಟೇರ್ ಪ್ರದೇಶಕ್ಕೆ ಹನಿ ನೀರಾವರಿ ಕಲ್ಪಿಸಲು ರೂ.1530.00 ಕೋಟಿ ಮೊತ್ತದ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.<br><br>ಈಗಾಗಲೇ ಯೋಜನೆಯಡಿ ಟರ್ನ್ ಕೀ ಆಧಾರದ ಮೇರೆಗೆ ಕೈಗೊಂಡಿರುವ ಮುಖ್ಯ ಸ್ಥಾವರ ಕಾಮಗಾರಿ ಮುಕ್ತಾಯ ಹಂತದಲ್ಲಿರುತ್ತದೆ. ಮುಂದುವರೆದು, ಯೋಜನೆಯಡಿ ಪ್ರಸ್ತುತ ಯೋಜಿತ 36,100 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶಕ್ಕೆ ಹನಿ ನೀರಾವರಿ ಪದ್ಧತಿ (Drip Irrigation) ಅಳವಡಿಕೆಗಾಗಿ ಗುತ್ತಿಗೆ ವಹಿಸಿ ಪ್ರಾರಂಭಿಸಲಾದ 3 ಪ್ಯಾಕೇಜ್ ಕಾಮಗಾರಿಗಳ ವಿವರಗಳು ಈ ಕೆಳಗಿನಂತಿವೆ.<br><br>(ರೂ. ಕೋಟಿಗಳಲ್ಲಿ)
<table>
<tr><th>ಕ್ರ. ಸಂ.</th><th>ಕಾಮಗಾರಿ ಹೆಸರು</th><th>ಗುತ್ತಿಗೆದಾರರ ಹೆಸರು</th><th>ಗುತ್ತಿಗೆ ಮೊತ್ತ</th><th>ಕಾಮಗಾರಿ ಪ್ರಾರಂಭಿಸಿದ ದಿನಾಂಕ</th></tr>
<tr><td>1</td><td>ನಂದವಾಡಗಿ ಏತ ನೀರಾವರಿ ಯೋಜನೆ ಡ್ರಿಪ್ ಪ್ಯಾಕೇಜ-1 (12,000 ಹೆಕ್ಟೇರ್)</td><td>ಮೆ:ತಹಲ್ ಕನ್ಸಲ್ಟಿಂಗ್ ಇಂಜನೀಯರ್ಸ್</td><td>615.59</td><td>09.01.2020</td></tr>
<tr><td>2</td><td>ನಂದವಾಡಗಿ ಏತ ನೀರಾವರಿ ಯೋಜನೆ ಡ್ರಿಪ್ ಪ್ಯಾಕೇಜ-2 (12,500 ಹೆಕ್ಟೇರ್)</td><td>ಮೆ:ಮೇಘಾ ಇಂಜನೀಯರಿಂಗ್ & ಇನ್‌ಫ್ರಾಸ್ಟ್ರಕ್ಚರ್ಸ್ ಲಿ.</td><td>612.09</td><td>18.11.2019</td></tr>
<tr><td>3</td><td>ನಂದವಾಡಗಿ ಏತ ನೀರಾವರಿ ಯೋಜನೆ ಡ್ರಿಪ್ ಪ್ಯಾಕೇಜ-2 (11,600 ಹೆಕ್ಟೇರ್)</td><td>ಮೆ: ಎನ್. ಡಿ ವಡ್ಡರ್ &ಕಂಪನಿ</td><td>591.82</td><td>05.10.2019</td></tr>
</table>
2019-20ನೇ ಸಾಲಿನ (ಫೆಬ್ರವರಿ 2019) ಆಯವ್ಯಯ ಭಾಷಣದಲ್ಲಿ ಮಸ್ಕಿ ಮತ್ತು ಲಿಂಗಸುಗೂರು ವ್ಯಾಪ್ತಿಯಲ್ಲಿ 18,000 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸುವ ನಂದವಾಡಗಿ ಏತ ನೀರಾವರಿಯ 2ನೇ ಹಂತದ ಯೋಜನೆಯನ್ನು ಘೋಷಿಸಲಾಗಿರುತ್ತದೆ. ಹಂತ-2ರ ಯೋಜನೆಗಾಗಿ ರೂ.882.00 ಕೋಟಿ ಅಂದಾಜು ಮೊತ್ತದ ವಿಸ್ತೃತ ಯೋಜನಾ ವರದಿಯು ನಿಗಮದ ಹಂತದಲ್ಲಿ ಪರಿಶೀಲನೆಯಲ್ಲಿದೆ.</td></tr>
</table>

| ಆ) | ಸದರಿ ಏತ ನೀರಾವರಿ ಯೋಜನೆಗೆ ಲಿಂಗಸಗೂರು ವಿಧಾನ ಸಭಾ ಕ್ಷೇತ್ರದ ಎಷ್ಟು ಹಳ್ಳಿಗಳು ಒಳಪಡುತ್ತವೆ ಹಾಗೂ ಎಷ್ಟು ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲಾಗುವುದು; | ಪ್ರಸ್ತುತ ಅನುಷ್ಠಾನಗೊಳಿಸುತ್ತಿರುವ ನಂದವಾಡಗಿ ಏತ ನೀರಾವರಿ ಯೋಜನೆ ಹಂತ-1ರಡಿಯಲ್ಲಿ ಯೋಜಿತ 36.100 ಹೆಕ್ಟೇರ್ ಹನಿ ನೀರಾವರಿ ಕ್ಷೇತ್ರ ಪೈಕಿ ಲಿಂಗಸುಗೂರು ಮತಕ್ಷೇತ್ರದ 42 ಹಳ್ಳಿಗಳ ಸುಮಾರು 20,117 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶ ನೀರಾವರಿ ಸೌಲಭ್ಯಕ್ಕೆ ಒಳಪಡಲಿದೆ. |
|---|---|---|
| ಇ | ಲಿಂಗಸಗೂರು ವಿಧಾನ ಸಭಾ ಕ್ಷೇತ್ರಕ್ಕೆ ಎಸ್.ಸಿ.ಪಿ ಮತ್ತು ಟಿ.ಎಸ್.ಪಿ. ಯೋಜನೆಯಡಿಯಲ್ಲಿ ಅನುದಾನ ಮಂಜೂರಾತಿ ನೀಡುವಲ್ಲಿ ತಾರತಮ್ಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಇದನ್ನು ಸರಿಪಡಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಜನಪ್ರತಿನಿಧಿಗಳ ಶಿಫಾರಸ್ಸಿನ ಮೇರೆಗೆ ಎಸ್.ಸಿ./ಎಸ್.ಟಿ. ಜನಾಂಗದವರಿಗೆ ಅನುಕೂಲವಾಗುವಂತಹ ಕಾಮಗಾರಿಗಳ ಅವಶ್ಯಕತೆ & ಫಲಾನುಭವಿಗಳ ಲಭ್ಯತೆಯನ್ನು ಗಮನದಲ್ಲಿರಿಸಿ ಹಂಚಿಕೆ ಮಾಡಲಾಗಿದ್ದು, ಅನುದಾನ ಹಂಚಿಕೆಯಲ್ಲಿ ಯಾವುದೇ ತಾರತಮ್ಯವಾಗಿರುವುದಿಲ್ಲ. |

ಸಂಖ್ಯೆ: ಜಸಂಇ 30 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

ಸಂಖ್ಯೆ: ಜಸಂಇ 28 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 09.06.2020

**ಇವರಿಂದ**
ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀಯಶವಂತರಾಯಗೌಡ ವಿಠ್ಠಲಗೌಡ.ಪಾಟೀಲ್ (ಇಂಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1694ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀಯಶವಂತರಾಯ ಗೌಡವಿಠ್ಠಲಗೌಡ ಪಾಟೀಲ್ (ಇಂಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1694ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಡನೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ–5)

09/06/2020

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1694 |
| ಸದಸ್ಯರ ಹೆಸರು | : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) |
| ಉತ್ತರಿಸುವ ದಿನಾಂಕ | : 17.03.2020 |
| ಉತ್ತರಿಸುವ ಸಚಿವರು | : ಜಲಸಂಪನ್ಮೂಲ ಸಚಿವರು |

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಕೆರೆ ತುಂಬುವ ಯೋಜನೆಯಡಿ ಇಂಡಿ ತಾಲ್ಲೂಕಿನ ಯಾವ ಕೆರೆಗಳಿಗೆ ನೀರು ತುಂಬಿಸಲಾಗಿದೆ; (ವಿವರ ನೀಡುವುದು) | ಕೃಷ್ಣಾ ಭಾಗ್ಯ ಜಲ ನಿಗಮದ ವತಿಯಿಂದ ಕೈಗೆತ್ತಿಕೊಂಡಿರುವ ಈ ಕೆಳಕಂಡ 3 ಯೋಜನೆಗಳ ಮುಖಾಂತರ ಭೀಮಾ ನದಿಯಿಂದ ನೀರನ್ನು ಎತ್ತಿ ಇಂಡಿ ತಾಲೂಕಿನ ಕೆರೆಗಳಿಗೆ ನೀರು ತುಂಬಿಸಲಾಗುತ್ತಿದೆ. ವಿವರಗಳು ಈ ಕೆಳಗಿನಂತಿವೆ:<br><br>1. **ಅಣಚಿ ಕೆರೆ ತುಂಬುವ ಯೋಜನೆ :** ಈ ಯೋಜನೆಯಡಿ 9 ಕೆರೆಗಳಾದ ಅರ್ಜನಾಳ, ಗುಂದವಾನ ಕೆರೆ-1, ನಂದರಗಿ, ಗುಂದವಾನ ಕೆರೆ-2, ಹಡಲಸಂಗ, ಹೊರ್ತಿ, ದೇಗಿನಾಳ, ಕೊಳೂರಗಿ ಹಾಗೂ ಸಾವಳಸಂಗ ಕೆರೆಗಳನ್ನು ತುಂಬಿಸಲಾಗಿದೆ.<br><br>2. **ಬುಯ್ಯಾರ ಕೆರೆ ತುಂಬುವ ಯೋಜನೆ:** ಈ ಯೋಜನೆಯಡಿ ಒಟ್ಟು 8 ಕೆರೆಗಳಾದ ಇಂಡಿ-1, ಇಂಡಿ-2, ಹಂಜಗಿ, ಬಬಲಾದ, ತಡವಲಗಾ, ನಿಂಬಾಳ, ರಾಜನಾಳ ಹಾಗೂ ಕೊಟ್ನಾಳ ಕೆರೆಗಳನ್ನು ತುಂಬಿಸಲಾಗಿದೆ.<br><br>3. **ಸಂಖ ಕೆರೆ ತುಂಬುವ ಯೋಜನೆ:** ಈ ಯೋಜನೆಯಡಿ ಚಡಚಣ ಮತ್ತು ಇಂಡಿ ತಾಲೂಕುಗಳ ಒಟ್ಟು 8 ಕೆರೆಗಳಾದ ಚಡಚಣ, ಜೀರಂಕಲಗಿ, ಗೋಡಿಹಾಳ, ಲೋಣಿ, ಸಾತಲಗಾಂವ, ದೇವರನಿಂಬರಗಿ, ಜಿಗಜೀವಣಗಿ ಹಾಗೂ ಇಂಚಗೇರಿ ಕೆರೆಗಳನ್ನು ತುಂಬಿಸಲಾಗಿದೆ. |
| ಆ) | ಸದರಿ ಕೆರೆಗಳಿಗೆ ಸಮರ್ಪಕವಾಗಿ ನೀರು ಪೂರೈಕೆಯಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿದ್ಯುತ್ ಪೂರೈಕೆಯಲ್ಲಿ ವ್ಯತ್ಯಯ, ಪ್ರಸಕ್ತ ಸಾಲಿನಲ್ಲಿ ಭೀಮಾ ನದಿಯಲ್ಲಿ ಮಹಾಪೂರ ಬಂದಾಗ ಜಾಕ್‌ವೆಲ್‌ಗಳಿಗೆ ನೀರು ಸುತ್ತುವರೆದಿದ್ದು ವಿದ್ಯುತ್ ಅವಘಡ ತಪ್ಪಿಸಲು ವಿದ್ಯುತ್ ಪೂರೈಕೆ ಸ್ಥಗಿತಗೊಳಿಸಿರುವುದರಿಂದ, ನದಿ ಪಾತ್ರದಡಿ ಡಿಸೆಂಬರ್ ತಿಂಗಳಲ್ಲಿ ನೀರಿನ ಪ್ರಮಾಣ ಕಡಿಮೆ ಆಗಿರುವುದರಿಂದ, ಕೃಷಿ ಚಟುವಟಿಕೆಗೆ ನೀರು ಪೂರೈಕೆಗಾಗಿ ಹಿನ್ನೀರು ಅವಲಂಬಿತ ರೈತರು ಕೆರೆ ತುಂಬುವ ಯೋಜನೆಯ ಪಂಪುಗಳನ್ನು ಸ್ಥಗಿತಗೊಳಿಸಿರುವುದರಿಂದಲೂ ಹಾಗೂ ಯೋಜನೆಯಡಿ ಪೈಪ್‌ಗಳಿಗೆ ಅಳವಡಿಸಿದ Air value ಗಳಿಗೆ ದುಷ್ಕರ್ಮಿಗಳು ಪೈಪುಗಳನ್ನು ಅಳವಡಿಸಿ ಅನಧಿಕೃತವಾಗಿ ನೀರು ತೆಗೆದುಕೊಂಡಿರುವ ಕಾರಣಗಳಿಂದಾಗಿ ಸಂಖ ಮತ್ತು ಭುಯ್ಯಾರ ಕೆರೆಗಳಿಗೆ ಸಮರ್ಪಕವಾಗಿ ನೀರು ಪೂರೈಸುವಲ್ಲಿ ವ್ಯತ್ಯಯ ಉಂಟಾಗಿರುತ್ತದೆ. |
| ಇ | ಬಂದಿದ್ದಲ್ಲಿ, ಈ ಅಸಮರ್ಪಕ ನೀರು ಪೂರೈಕೆಗೆ ಕಾರಣಗಳೇನು; (ವಿವರ ನೀಡುವುದು) | |

| ಈ | ಹೊಸದಾಗಿ ಇಂಡಿ ತಾಲ್ಲೂಕಿನ ಯಾವ ಯಾವ ಕೆರೆಗಳಿಗೆ ನೀರು ತುಂಬಿಸುವ ಯೋಜನೆಗಳನ್ನು ಕೈಗೊಳ್ಳಲಾಗಿದೆ; ಆ ಕೆರೆಗಳು ಯಾವುವು; (ವಿವರ ನೀಡುವುದು) | ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರಡಿಯ ಮುಳವಾಡ ಏತ ನೀರಾವರಿ ಯೋಜನೆಯಡಿ ಬರುವ ತಿಡಗುಂದಿ ಶಾಖಾ ಕಾಲುವೆ ಕಿ.ಮೀ 56.00 ರಿಂದ ಕಿ.ಮೀ 65.00 ರವರೆಗಿನ ಕಾಲುವೆ ಮಾರ್ಗ ಮಧ್ಯದಲ್ಲಿ ಬರುವ ಇಂಡಿ ತಾಲ್ಲೂಕಿನ ಅಥರ್ಗಾ, ತಡವಲಗಾ ಮತ್ತು ಹಂಜಗಿ ಕೆರೆಗಳನ್ನು ಕಾಲುವೆ ಜಾಲದಿಂದ ಗುರುತ್ವ ಕೊಳವೆ ಮೂಲಕ ತುಂಬಿಸಲು ಯೋಜಿಸಲಾಗಿದ್ದು, ಪ್ಯಾಕೇಜ್ ಕಾಮಗಾರಿಯ ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |
|---|---|---|
| ಉ | ಈ ಯೋಜನೆಯ ಸ್ವರೂಪ ಮತ್ತು ಯೋಜನಾ ವೆಚ್ಚವೆಷ್ಟು; | |
| ಊ | ಸದರಿ ಕೆರೆ ತುಂಬಿಸುವ ಯೋಜನೆಯನ್ನು ಯಾವಾಗ ಪ್ರಾರಂಭಿಸಲಾಗುವುದು ಮತ್ತು ಯಾವ ಕಾಲಮಿತಿಯೊಳಗೆ ಸಂಪೂರ್ಣಗೊಳಿಸಲಾಗುವುದು; ಅದಕ್ಕಾಗಿ ಸರ್ಕಾರ ಕೈಗೊಂಡ ಕ್ರಮಗಳೇನು? | |

ಸಂಖ್ಯೆ: ಜಸಂಇ 28 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಜಸಂಇ 33 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 09.06.2020

**ಇವರಿಂದ**
ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2148ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2148ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಡನೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ-5

Recd
09/06/2020

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 2148 |
| ಸದಸ್ಯರ ಹೆಸರು | : ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ) |
| ಉತ್ತರಿಸುವ ದಿನಾಂಕ | : 17.03.2020 |
| ಉತ್ತರಿಸುವ ಸಚಿವರು | : ಜಲಸಂಪನ್ಮೂಲ ಸಚಿವರು |

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಮುಳವಾಡ ಏತ ನೀರಾವರಿ ಯೋಜನೆಯ ಬಳೂತಿ ಜಾಕ್‌ವೆಲ್‌ನಲ್ಲಿ ಅಳವಡಿಸಲಾಗಿರುವ ವಿದ್ಯುತ್ ಪರಿವರ್ತಕಗಳು (Transformer) ಎಷ್ಟು; | ಮುಳವಾಡ ಏತ ನೀರಾವರಿ ಯೋಜನೆಯ ಬಳೂತಿ ಜಾಕ್‌ವೆಲ್‌ನಲ್ಲಿ 220/6.9 KV & 35 MVA ಸಾಮರ್ಥ್ಯದ ಒಟ್ಟು 2 ಪರಿವರ್ತಕಗಳನ್ನು (Transformer) ಅಳವಡಿಸಲಾಗಿರುತ್ತವೆ. |
| ಆ) | ಅವುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮತ್ತು ನಿಷ್ಕ್ರಿಯಗೊಂಡಿರುವ ಪರಿವರ್ತಕಗಳ ಸಂಖ್ಯೆ ಎಷ್ಟು; | ಪ್ರಸ್ತುತ 2 ಪರಿವರ್ತಕಗಳಲ್ಲಿ ಒಂದು ಸಮರ್ಥವಾಗಿ ಕಾರ್ಯ ನಿರ್ವಹಿಸುತ್ತಿದ್ದು, ಮತ್ತೊಂದು ನಿಷ್ಕ್ರಿಯಗೊಂಡ ಪರಿವರ್ತಕದ ಪುನಶ್ಚೇತನ ಕಾರ್ಯ ಪ್ರಗತಿಯಲ್ಲಿದೆ. |
| ಇ | ಪರಿವರ್ತಕಗಳು ನಿಷ್ಕ್ರಿಯಗೊಂಡಿರುವುದಕ್ಕೆ ಕಾರಣಗಳೇನು ಮತ್ತು ನಿಷ್ಕ್ರಿಯಗೊಂಡಿರುವ ಪರಿವರ್ತಕಗಳನ್ನು ದುರಸ್ತಿ ಮಾಡುವುದಕ್ಕೆ ಅಥವಾ ಹೊಸದಾಗಿ ಅಳವಡಿಸುವುದಕ್ಕೆ ಏನಾದರೂ ಕ್ರಮ ಕೈಗೊಳ್ಳಲಾಗಿದೆಯೆ; | ದಿನಾಂಕ:29.012.2018 ರಂದು ವಿದ್ಯುತ್ ಶಾರ್ಟ ಸರ್ಕ್ಯೂಟನಿಂದ (Short Circuit) ಜಾಕವೆಲ್ ಮತ್ತು ಸಬ್ ಸ್ಟೇಷನ್‌ಗೆ ಬೆಂಕಿ ಹತ್ತಿದ ಕಾರಣ ಸಬ್ ಸ್ಟೇಷನ್‌ನಲ್ಲಿರುವ 2 ಪರಿವರ್ತಕಗಳಲ್ಲಿ ಒಂದು ಸಂಪೂರ್ಣ ನಿಷ್ಕ್ರಿಯಗೊಂಡು ಮತ್ತೊಂದು ಭಾಗಶ: ನಿಷ್ಕ್ರಿಯಗೊಂಡಿತ್ತು. ಭಾಗಶ: ನಿಷ್ಕ್ರಿಯಗೊಂಡ ಪರಿವರ್ತಕವನ್ನು ದುರಸ್ಥಿಗೊಳಿಸಿ ಚಾಲ್ತಿಯಲ್ಲಿಡಲಾಗಿದೆ.<br>ಸಂಪೂರ್ಣ ನಿಷ್ಕ್ರಿಯಗೊಂಡಿರುವ ಪರಿವರ್ತಕವನ್ನು ಬದಲಾಯಿಸಿ, ಪರಿವರ್ತಕವನ್ನು ಅಳವಡಿಸುವ ಕಾರ್ಯವನ್ನು ಮೂಲ ಗುತ್ತಿಗೆದಾರರಿಂದಲೇ ಅವರ ಹೊಣೆ ಮತ್ತು ವೆಚ್ಚದಲ್ಲೇ ನಿರ್ವಹಿಸಲಾಗುತ್ತಿದೆ. |
| ಈ | ಹಾಗಿದ್ದಲ್ಲಿ, ನಿಷ್ಕ್ರಿಯಗೊಂಡಿರುವ ಪರಿವರ್ತಕಗಳ ದುರಸ್ತಿಗಾಗಿ ಮತ್ತು ಅವುಗಳನ್ನು ಹೊಸದಾಗಿ ಅಳವಡಿಸುವುದಕ್ಕಾಗಿ ತಗಲುವ ಅಂದಾಜು ವೆಚ್ಚವೆಷ್ಟು ಮತ್ತು ಅನುದಾನ ಮಂಜೂರು ಮಾಡಿದ್ದಲ್ಲಿ, ಅದರ ಮೊತ್ತವೆಷ್ಟು; | ಬಳೂತಿ ಜಾಕ್‌ವೆಲ್‌ನಲ್ಲಿ ಹೊಸದಾಗಿ 220/6.9 KV & 35 MVA ಪರಿವರ್ತಕ (Transformer) ಅಳವಡಿಸುವ ಕಾರ್ಯವನ್ನು ಮೂಲ ಗುತ್ತಿಗೆದಾರರಿಂದಲೇ ಅವರ ಹೊಣೆ ಮತ್ತು ವೆಚ್ಚದಲ್ಲೇ ನಿರ್ವಹಿಸಲಾಗುತ್ತಿದ್ದು, ಹೆಚ್ಚುವರಿ ಅನುದಾನ ಮಂಜೂರು ಮಾಡಿರುವುದಿಲ್ಲ. |
| ಉ | ದುರಸ್ತಿ ಅಥವಾ ಹೊಸದಾಗಿ ಅಳವಡಿಸುವ ಕಾಮಗಾರಿ ಕೆಲಸವನ್ನು ಕೈಗೊಂಡಿದ್ದಲ್ಲಿ ಯಾವ ಗುತ್ತಿಗೆ ಏಜೆನ್ಸಿಗೆ ವಹಿಸಿ ಕೊಡಲಾಗಿದೆ ಹಾಗೂ ಕಾಮಗಾರಿಯಲ್ಲಿ ಸಾಧಿಸಿರುವ ಭೌತಿಕ ಮತ್ತು ಆರ್ಥಿಕ ಪ್ರಗತಿ ಏನು? | ಬಳೂತಿ ಜಾಕ್‌ವೆಲ್‌ನಲ್ಲಿ ಉಂಟಾದ ವಿದ್ಯುತ್ ಅವಘಡದಿಂದ ಭಾಗಶ: ನಿಷ್ಕ್ರಿಯಗೊಂಡ ಒಂದು ಪರಿವರ್ತಕವನ್ನು ಮೂಲ ಗುತ್ತಿಗೆದಾರರಾದ ಮೆ:ಮೆಘಾ ಇಂಜಿನೀಯರಿಂಗ್ ಇನ್‌ಫ್ರಾಸ್ಟ್ರಚರ್ಸ್ ಲಿ. ಹೈದರಬಾದ್ ಇವರಿಂದ ದುರಸ್ಥಿಗೊಳಿಸಿ ಚಾಲ್ತಿಯಲ್ಲಿಡಲಾಗಿದೆ. ಸಂಪೂರ್ಣ ನಿಷ್ಕ್ರಿಯಗೊಂಡಿರುವ ಮತ್ತೊಂದು ಪರಿವರ್ತಕವನ್ನು ಬದಲಾಯಿಸಿ, ಹೊಸ ಪರಿವರ್ತಕವನ್ನು ಅಳವಡಿಸುವ ಕಾರ್ಯವನ್ನು ಮೂಲ ಗುತ್ತಿಗೆದಾರರಿಂದಲೇ ಅವರ ಹೊಣೆ ಮತ್ತು ವೆಚ್ಚದಲ್ಲೇ ನಿರ್ವಹಿಸಲಾಗುತ್ತಿದೆ. |

ಸಂಖ್ಯೆ: ಜಸಂಇ 33 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 23 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 09.06.2020

**ಇವರಿಂದ**
ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ದೊಡ್ಡ ಗೌಡರ ಮಹಾಂತೇಶ ಬಸಂತರಾಯ (ಕಿತ್ತೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1469ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ದೊಡ್ಡ ಗೌಡರ ಮಹಾಂತೇಶ ಬಸಂತರಾಯ (ಕಿತ್ತೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1469ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಡನೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ-5)

Recd
09/06/2020

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1469
ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ(ಕಿತ್ತೂರು)
ಉತ್ತರಿಸುವ ದಿನಾಂಕ : 17.03.2020
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ: | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಮಲಪ್ರಭಾ ನದಿಗೆ ಕಟ್ಟಲಾದ ನವಿಲುತೀರ್ಥ (ರೇಣುಕಾ ಸಾಗರ) ಡ್ಯಾಂ ಕಟ್ಟಡ ಪೂರ್ಣವಾಗಿ ನಿರ್ಮಾಣವಾದದ್ದು ಯಾವಾಗ; | ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಮನವಳ್ಳಿ ಗ್ರಾಮದ ಹತ್ತಿರ ಮಲಪ್ರಭಾ ನದಿಗೆ ಅಡ್ಡಲಾಗಿ ನವಿಲುತೀರ್ಥ (ರೇಣುಕಾ ಸಾಗರ) ಡ್ಯಾಂ 1973ರಲ್ಲಿ ಪೂರ್ಣಗೊಂಡಿದೆ. |
| ಆ) | ಡ್ಯಾಂ ಕಟ್ಟಡ ಪೂರ್ಣವಾಗ ನಂತರ ಗರಿಷ್ಠ ಮಟ್ಟದವರೆಗೆ ಮೊದಲನೇ ಸಲ ನೀರು ಸಂಗ್ರಹವಾದ್ದು ಯಾವಾಗ; | ದಿನಾಂಕ:26/8/1997 ರಂದು ಡ್ಯಾಂನಡಿ ಮೊದಲನೇ ಸಲ ಗರಿಷ್ಠ ಮಟ್ಟಕ್ಕೆ (2079.50 ಅಡಿ) ನೀರು ಸಂಗ್ರಹವಾಗಿರುತ್ತದೆ. |
| ಇ | ನವಿಲುತೀರ್ಥ ಡ್ಯಾಂ ನಲ್ಲಿ ಗರಿಷ್ಠ ಮಟ್ಟದ ನೀರು ಸಂಗ್ರಹವಾದಾಗ ಭೂ ಸ್ವಾಧೀನಕ್ಕೊಳಪಟ್ಟ ಬೈಲಹೊಂಗಲ ತಾಲ್ಲೂಕಿನ ಎಲ್ಲಾ ಜಮೀನುಗಳು ನೀರಿನಿಂದ ಜಲಾವೃತವಾಗಲಿದೆಯೇ? | ನವಿಲುತೀರ್ಥ ಡ್ಯಾಂ ನಲ್ಲಿ ಗರಿಷ್ಠ ಮಟ್ಟದ ನೀರು ಸಂಗ್ರಹವಾದಾಗ ಭೂ ಸ್ವಾಧೀನಕ್ಕೊಳಪಟ್ಟ ಬೈಲಹೊಂಗಲ ತಾಲ್ಲೂಕಿನ ಎಲ್ಲಾ ಜಮೀನುಗಳು ನೀರಿನಿಂದ ಜಲಾವೃತವಾಗುತ್ತದೆ.<br><br>ಅಣೆಕಟ್ಟಿನಲ್ಲಿ ಗರಿಷ್ಠ ಮಟ್ಟದವರೆಗೆ ನೀರು ಸಂಗ್ರಹವಾದಾಗ ಒಟ್ಟಾರೆ 34,892 ಎಕರೆ ಪ್ರದೇಶ ಮುಳುಗಡೆಯಾಗುತ್ತಿದ್ದು, ಅದರಂತೆ ಭೂ ಸ್ವಾಧೀನಕ್ಕೆ ಒಳಪಟ್ಟ ಬೈಲಹೊಂಗಲ ತಾಲ್ಲೂಕಿನ 13,950 ಎಕರೆ ಜಮೀನು ನೀರಿನಿಂದ ಜಲಾವೃತವಾಗುತ್ತದೆ. |

ಸಂಖ್ಯೆ: ಜಸಂಇ 23 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

## ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 23 ಡಬ್ಲ್ಯೂಎಲ್ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:05.06.2020.

ಇವರಿಂದ:

ಸರ್ಕಾರದ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ,
ಬೆಂಗಳೂರು-560001.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು-560001.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2206ಕ್ಕೆ ಉತ್ತರ ಒದಗಿಸುವ ಬಗ್ಗೆ.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.2206/2020, ದಿ:05.03.2020.

------

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2206ಕ್ಕೆ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ಎಸ್.ಎನ್.ಕೇಶವಪ್ರಕಾಶ್)
ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ-4)
ಜಲಸಂಪನ್ಮೂಲ ಇಲಾಖೆ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2206
2. ಸದಸ್ಯರ ಹೆಸರು : ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ)
3. ಉತ್ತರಿಸಬೇಕಾದ ದಿನಾಂಕ : 17.03.2020
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕಳೆದ 3 ವರ್ಷಗಳಿಂದ ಬೆಳಗಾವಿ ಜಿಲ್ಲೆಯಲ್ಲಿ ನೀರಾವರಿ ಇಲಾಖೆಯಿಂದ ಕೈಗೊಳ್ಳಬೇಕಾದ ಕಾಮಗಾರಿಗಳಿಗೆ ಸಲ್ಲಿಕೆಯಾದ ಪ್ರಸ್ತಾವನೆಗಳೆಷ್ಟು; ಯಾವ ಕಾಮಗಾರಿಗಳಿಗೆ ಎಷ್ಟು ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ; ಅವುಗಳಲ್ಲಿ ಮಂಜೂರು ಮಾಡಿದ/ಮಾಡಿರದ ಪ್ರಸ್ತಾವನೆಗಳ ಪ್ರತ್ಯೇಕ ವಿವರ ತಿಳಿಸುವುದು; (ವರ್ಷವಾರು, ಲೆಕ್ಕ ಶೀರ್ಷಿಕೆವಾರು ಮತಕ್ಷೇತ್ರವಾರು, ಕಾಮಗಾರಿ ವಿವರಗಳನ್ನು ಪ್ರಸ್ತಾಪಿತ ಮೊತ್ತದೊಂದಿಗೆ ಪ್ರಸ್ತಾಪಿಸಿದ ಗಣ್ಯರ ಹೆಸರುಗಳೊಂದಿಗೆ ವಿವರ ತಿಳಿಸುವುದು) | ವಿವರಗಳನ್ನು **ಅನುಬಂಧ-1**ರಲ್ಲಿ ಲಗತ್ತಿಸಲಾಗಿದೆ. |
| ಆ) | ರಾಜ್ಯದ ವಿವಿಧ ನಿಗಮಗಳಿಗೆ ಸರಕಾರದ ವಿವಿಧ ಲೆಕ್ಕ ಶೀರ್ಷಿಕೆಗಳಲ್ಲಿ ಸರಕಾರವು ಬಿಡುಗಡೆ ಮಾಡಿರುವ ಅನುದಾನವೆಷ್ಟು; (ಲೆಕ್ಕ ಶೀರ್ಷಿಕೆವಾರು, ವರ್ಷವಾರು, ನಿಗಮವಾರು ವಿವರ ನೀಡುವುದು) | ವಿವರಗಳನ್ನು **ಅನುಬಂಧ-2** ರಲ್ಲಿ ಲಗತ್ತಿಸಲಾಗಿದೆ. |
| ಇ) | ಬೆಳಗಾವಿ ದಕ್ಷಿಣ ಮತಕ್ಷೇತ್ರದ ಯಳ್ಳೂರು ಹಾಗೂ ಇತರ 15 ಗ್ರಾಮಗಳಿಗೆ ಕುಡಿಯುವ ನೀರಿನ ಸೌಲಭ್ಯಕ್ಕಾಗಿ ಇರುವ ಪ್ರಸ್ತಾವನೆಯು ಯಾವ ಹಂತದಲ್ಲಿದೆ? (ವಿವರಗಳನ್ನು ನೀಡುವುದು) | ಸರ್ಕಾರದ ದಿನಾಂಕ: 03.09.2019ರ ಪತ್ರದಲ್ಲಿ ಬೆಳಗಾವಿ ತಾಲೂಕಿನ ಅರಳಿಕಟ್ಟಿ ಮತ್ತು ಇತರೆ 3 ಗ್ರಾಮಗಳಿಗೆ ಹಾಗೂ ಹಲಗಾ ಮತ್ತು ಇತರೆ 4 ಗ್ರಾಮಗಳಿಗೆ ಕುಡಿಯುವ ನೀರಿನ ಯೋಜನೆಗೆ ಅವಶ್ಯವಿರುವ ವಾರ್ಷಿಕ 0.0844 ಟಿಎಂಸಿ ನೀರನ್ನು ಹಾಗೂ ಯಳ್ಳೂರು ಮತ್ತು ಇತರೆ 15 ಗ್ರಾಮಗಳಿಗೆ ಕುಡಿಯುವ ನೀರಿನ ಯೋಜನೆಗೆ ಅವಶ್ಯವಿರುವ ವಾರ್ಷಿಕ 0.1336 ಟಿಎಂಸಿ ನೀರನ್ನು ಮಲಪ್ರಭಾ ನದಿಯಿಂದ (ನೀರನ್ನೆತ್ತುವ ಸ್ಥಳದ ಮೇಲ್ಭಾಗದ ಬಳಕೆಗಳನ್ನು ಮತ್ತು ಕೆಳಭಾಗದ ಬೇಡಿಕೆಗಳನ್ನು ಪರಿಗಣಿಸಿ ಲಭ್ಯವಾಗುವ ಪ್ರಮಾಣದಲ್ಲಿ) ಬಳಸಲು ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಗೆ ಅನುಮತಿ ನೀಡಲಾಗಿರುತ್ತದೆ. ಅದರನ್ವಯ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯಿಂದ ಮುಂದಿನ ಅಗತ್ಯ ಕ್ರಮಕೈಗೊಳ್ಳಬೇಕಾಗಿರುತ್ತದೆ. |

**ಸಂಖ್ಯೆ: ಜಸಂಇ 23 ಡಬ್ಲ್ಯೂಎಲ್ಎ 2020**

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು
(ಬೃಹತ್ ಮತ್ತು ಮಧ್ಯಮ ನೀರಾವರಿ)

# ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2206 ಕ್ಕೆ ಅನುಬಂಧ-1

ಕರ್ನಾಟಕ ನೀರಾವರಿ ನಿಗಮದ ವ್ಯಾಪ್ತಿಯಡಿ ಬೆಳಗಾವಿ ಜಿಲ್ಲೆಯಲ್ಲಿ ಕಳೆದ ಮೂರು ವರ್ಷದ ಅವಧಿಯಲ್ಲಿ ನೀರಾವರಿ ಇಲಾಖೆಯಿಂದ ಕೈಕೊಳ್ಳಬೇಕಾದ ಕಾಮಗಾರಿಗಳಿಗೆ ವರ್ಷವಾರು, ಲೆಕ್ಕಶೀರ್ಷಿಕೆವಾರು, ಮತಕ್ಷೇತ್ರವಾರು, ಕಾಮಗಾರಿ ಪ್ರಸ್ತಾಪಿತ ಮೊತ್ತದೊಂದಿಗೆ ಪ್ರಸ್ತಾಪಿತ ಮೊತ್ತದೊಂದಿಗೆ ಪ್ರಸ್ತಾಪಿತ ಗಣ್ಯರ ಹೆಸರುಗಳೊಂದಿಗೆ, ಸಲ್ಲಿಕೆಯಾಗಿ ಮಂಜೂರು ಮಾಡಿದ ಯೋಜನಾ ಪ್ರಸ್ತಾವನೆಯಗಳ ವಿವರಗಳು ಈ ಕೆಳಗಿನಂತಿದೆ

| ಕ್ರ. ಸಂ | ಮಂಜೂರಾದ ಯೋಜನೆಯ ಹೆಸರು | ವಿಧಾನಸಭಾ ಕ್ಷೇತ್ರ | ಮಂಜೂರಾದ ವರ್ಷ | ಪ್ರಸ್ತಾಪಿಸಿದ ಗಣ್ಯರ ಹೆಸರು | ಪ್ರಸ್ತಾಪಿಸಿದ ಮೊತ್ತ | ಲೆ.ಶೀ. | ನಿಗದಿಪಡಿಸಿದ ಅನುದಾನ (ರೂ. ಕೋಟಿಗಳಲ್ಲಿ) | | | |
|---|---|---|---|---|---|---|---|---|---|---|
| | | | | | | | 2016-17 | 2017-18 | 2018-19 | 2019-20 |
| 1. | ಬಸವೇಶ್ವರ (ಕೆಂಪವಾಡ) ಏತ ನೀರಾವರಿ ಯೋಜನೆ | ಕಾಗವಾಡ | 2016-17 | ಶ್ರೀ ಭರಮಗೌಡ (ರಾಜು ಕಾಗೆ) ಮಾನ್ಯ ಮಾಜಿ ಶಾಸಕರು ಕಾಗವಾಡ | 1120.00 | 4701 | 2.00 | 80.00 | 140.00 | 80.00 |
| | | | | | | SDP | - | - | - | 52.00 |
| | | | | | | SCP | - | 13.72 | 23.00 | 15.00 |
| | | | | | | TSP | - | 5.56 | 10.00 | 5.00 |
| 2. | ಬಸವೇಶ್ವರ (ಕೆಂಪವಾಡ) ಏತ ನೀರಾವರಿ ಯೋಜನೆ | ಕಾಗವಾಡ | 2016-17 | ಶ್ರೀ ಭರಮಗೌಡ (ರಾಜು ಕಾಗೆ) ಮಾನ್ಯ ಮಾಜಿ ಶಾಸಕರು ಕಾಗವಾಡ | 1120.00 | 4701 | 2.00 | 80.00 | 140.00 | 80.00 |
| | | | | | | SDP | - | - | - | 52.00 |
| | | | | | | SCP | - | 13.72 | 23.00 | 15.00 |
| | | | | | | TSP | - | 5.56 | 10.00 | 5.00 |
| 3. | ಸುಲ್ತಾನಪೂರ ಬ್ಯಾರೇಜ ದುರಸ್ತಿ | ಹುಕ್ಕೇರಿ | 2016-17 | ಶ್ರೀ ಉಮೇಶ ಕತ್ತಿ ಮಾನ್ಯ ಶಾಸಕರು ಹುಕ್ಕೇರಿ | 19.52 | 4701 | - | - | 5.00 | 5.00 |
| 4. | ಹಿಪ್ಪರಗಿ ಭಾಂಧಾರದ ಕೆಳಗಡೆ ಸೇತುವೆ ನಿರ್ಮಾಣ ಯೋಜನೆ | ಅಥಣಿ, ಕಾಗವಾಡ | 2016-17 | ಶ್ರೀ ಸಿದ್ದು ಸವದಿ ಮಾನ್ಯ ಮಾಜಿ ಶಾಸಕರು ತೇರದಾಳ | 65.82 | 4701 | - | 5.5 | 8.65 | 30.08 |
| 5. | ಗೊಡಚಿನಮಲ್ಕಿ ಏತ ನೀರಾವರಿ ಯೋಜನೆ | ಗೋಕಾಕ | 2017-18 | ಶ್ರೀ ರಮೇಶ ಜಾರಕಿಹೊಳಿ ಮಾನ್ಯ ಜಲಸಂಪನ್ಮೂಲ ಸಚಿವರು. | 107.16 | 4701 | - | - | 15.00 | 20.00 |
| 6. | ಬೆಳಗಾವಿ ಜಿಲ್ಲೆಯ ರಾಯಬಾಗ ತಾಲ್ಲೂಕಿನ ಬರುವ 10 ಗ್ರಾಮಗಳ 17 ಕೆರೆಗಳು ಮತ್ತು ಹೆಚ್ಚುವರಿ 22 ಕೆರೆಗಳನ್ನು (ಒಟ್ಟು 39ಕೆರೆಗಳು) ಕೃಷ್ಣಾ ನದಿಯಿಂದ ನೀರನ್ನೆತ್ತಿ ತುಂಬಿಸುವ ಯೋಜನೆ | ರಾಯಬಾಗ | 2017-18 | ಶ್ರೀ ದುರ್ಯೋಧನ ಐಹೊಳೆ ಮಾನ್ಯ ಶಾಸಕರು ರಾಯಬಾಗ | 91.40 | SDP | - | - | 25.00 | 20.00 |
| 7. | ರಾಯಬಾಗ ತಾಲೂಕಿನ ಕುಡಚಿ ಮತಕ್ಷೇತ್ರದಡಿ ಬರುವ ಕೆರೆಗಳಿಗೆ ಕೃಷ್ಣಾ ನದಿಯಿಂದ ನೀರು ತುಂಬಿಸುವ ಯೋಜನೆ (6 ಗ್ರಾಮಗಳ 11 ಕೆರೆಗಳು) (10 ಗ್ರಾಮಗಳ 19 ಕೆರೆಗಳು) | ಕುಡಚಿ | 2017-18 | ಶ್ರೀ ಪಿ. ರಾಜೀವ ಮಾನ್ಯ ಶಾಸಕರು ಕುಡಚಿ | 34.38 | 4701 | - | - | 14.00 | 30.00 |

| | | | | | | | | | |
|---|---|---|---|---|---|---|---|---|---|
| 8. | ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಉಳ್ಳಾಗಡ್ಡಿ-ಖಾನಾಪೂರ ಕೆರೆಗೆ ಹಿರಣ್ಯಕೇಶಿ ನದಿಯಿಂದ ನೀರು ತುಂಬಿಸುವುದು | ಯಮಕಣ-ಮರ್ಡಿ | 2017-18 | ಶ್ರೀ ಸತೀಶ ಜಾರಕಿಹೊಳಿ ಮಾನ್ಯ ಶಾಸಕರು ಯಮಕನಮರಡಿ | 6.00 | NABARD | | 0.50 | 1.00 | 5.00 |
| 9. | ಮಲಪ್ರಭಾ ನದಿಯಿಂದ ಬೆಳಗಾವಿ ಜಿಲ್ಲೆಯ ಕಿತ್ತೂರು ಮತ್ತು ಬೈಲಹೊಂಗಲ ಮತಕ್ಷೇತ್ರ ವ್ಯಾಪ್ತಿಯಲ್ಲಿಯ ಒಟ್ಟು 64 ಕೆರೆಗಳಿಗೆ ನೀರು ತುಂಬಿಸುವ ಯೋಜನೆ. | ಬೈಲ-ಹೊಂಗಲ್, ಕಿತ್ತೂರು | 2017-18 | ಶ್ರೀ ಡಿ ಬಿ ಇನಾಮ್ದಾರ ಮಾನ್ಯ ಮಾಜಿ ಶಾಸಕರು ಕಿತ್ತೂರು | 248.20 | 4701 | – | – | 20.00 | 30.00 |
| 10. | ಚಿಕ್ಕೋಡಿ ತಾಲ್ಲೂಕಿನ ಚಿಕ್ಕೋಡಿ ಹಾಗೂ ಬಾನಂತಿಕೋಡಿ ಕೆರೆಗಳನ್ನು ತುಂಬಿಸುವ ಯೋಜನೆ | ಚಿಕ್ಕೋಡಿ-ಸದಲಗಾ | 2018-19 | ಶ್ರೀ ಪ್ರಕಾಶ ಹುಕ್ಕೇರಿ ಮಾನ್ಯ ಮಾಜಿ ಸಂಸದರು ಚಿಕ್ಕೋಡಿ | 10.05 | NABARD | | | – | 4.00 |
| 11. | ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲೂಕಿನ ಚಿಂಚಣಿ ಗ್ರಾಮದ ಕೆರೆಗೆ ದೂದಗಂಗಾ ನದಿಯಿಂದ ನೀರು ತುಂಬಿಸುವುದು | ಚಿಕ್ಕೋಡಿ-ಸದಲಗಾ | 2017-18 | ಶ್ರೀ ಪ್ರಕಾಶ ಹುಕ್ಕೇರಿ ಮಾನ್ಯ ಮಾಜಿ ಸಂಸದರು ಚಿಕ್ಕೋಡಿ | 6.50 | NABARD | | 0.75 | 1.00 | 1.00 |
| 12. | Modernisation of GLBC | ಗೋಕಾಕ, ಜಮಖಂಡಿ ಬೀಳಗಿ ರಾಯಬಾಗ ಅಥಣಿ ಚಿಕ್ಕೋಡಿ, ಮುಧೋಳ ತೇರದಾಳ ಕುಡಚಿ ಅರಭಾವಿ | 2018-19 | ಇಲಾಖೆಯಿಂದ ಪ್ರಸ್ತಾಪಿಸಲಾಗಿದೆ | 833.00 | 4701 | – | – | – | – |
| 13. | ಸಾಲಾಪೂರ ಏತ ನೀರಾವರಿ ಯೋಜನೆ | ರಾಮದುರ್ಗ ಮುಧೋಳ ಬಾದಾಮಿ | 2016-17 | ಶ್ರೀ ಅಶೋಕ ಪಟ್ಟಣ ಮಾನ್ಯ ಮಾಜಿ ಶಾಸಕರು ರಾಮದುರ್ಗ | 566.00 | 4701 | – | – | 40.00 | 50.00 |

**ವರ್ಷವಾರು, ಲೆಕ್ಕಶೀರ್ಷಿಕೆವಾರು, ಮತಕ್ಷೇತ್ರವಾರು, ಕಾಮಗಾರಿ ಪ್ರಸ್ತಾಪಿತ ಮೊತ್ತದೊಂದಿಗೆ ಪ್ರಸ್ತಾಪಿತ ಗಣ್ಯರಹೆಸರುಗಳೊಂದಿಗೆ ಸಲ್ಲಿಕೆಯಾಗಿ ಮಂಜೂರು ಮಾಡಿರದ ಯೋಜನಾ ಪ್ರಸ್ತಾವನೆಗಳ ವಿವರಗಳು ಈ ಕೆಳಗಿನಂತಿವೆ**

| ಕ್ರ ಸಂ | ವರ್ಷ | ಯೋಜನೆ | ಮೊತ್ತ ರೂ. ಕೋಟಿ | ಲೆಕ್ಕಶೀರ್ಷಿಕೆ | ಮತಕ್ಷೇತ್ರ | ಗಣ್ಯರಹೆಸರು | ಷರಾ |
|---|---|---|---|---|---|---|---|
| 1 | 2017–18 | Lifting of water from Hiranyakeshi river to Chikkodi Branch Canal near village Ingalgi of Hukkeri Taluka | 81.00 | 4701 | ಹುಕ್ಕೇರಿ | ಶ್ರೀ.ಉಮೇಶ ವಿಶ್ವನಾಥ ಕತ್ತಿ, ಶಾಸಕರು | ಪರಿಶೀಲನೆಯಲ್ಲಿದೆ |
| 2 | 2017–18 | ಅಥಣಿ ತಾಲ್ಲೂಕಿನ 17 ಕೆರೆಗಳನ್ನು ಝುಂಜರವಾಡ ಗ್ರಾಮದ ಹತ್ತಿರದ ಕೃಷ್ಣಾ ನದಿಯಿಂದ ನೀರನ್ನು ಎತ್ತಿ ತುಂಬಿಸುವ ಯೋಜನೆ | 632.14 | 4701 | ಅಥಣಿ | ಶ್ರೀ ಸತ್ಯಪ್ಪ ಬೀರಪ್ಪ ಬಾಗೇಣ್ಣವರ & ಶ್ರೀ ಮಹೇಶ ಐ. ಕುಮಠಳ್ಳಿ ಮಾನ್ಯ ಶಾಸಕರು, ಅಥಣಿ | ಪರಿಶೀಲನೆಯಲ್ಲಿದೆ |
| 3 | 2018–19 | ಬೆಳಗಾವಿ ಜಿಲ್ಲೆಯ ಅರಭಾವಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ 21 ಕೆರೆಗಳನ್ನು ಘಟಪ್ರಭಾ ನದಿಯಿಂದ ನೀರು ತುಂಬಿಸುವ ಯೋಜನೆ | 49.83 | 4701 | ಅರಭಾವಿ | ಶ್ರೀ ಬಾಲಚಂದ್ರ ಲ ಜಾರಕಿಹೊಳಿ, ಶಾಸಕರು | ಪರಿಶೀಲನೆಯಲ್ಲಿದೆ |
| 4 | 2018–19 | ಬೆಳಗಾವಿ ಜಿಲ್ಲೆಯ ಗೋಕಾಕ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ 32 ಕೆರೆಗಳನ್ನು ಘಟಪ್ರಭಾ ನದಿಯಿಂದ ನೀರು ತುಂಬಿಸುವ ಯೋಜನೆ | 165.00 | 4701 | ಗೋಕಾಕ | ಶ್ರೀ ರಮೇಶ ಲ ಜಾರಕಿಹೊಳಿ, ಶಾಸಕರು | ನಿಗಮದಲ್ಲಿ ಪರಿಶೀಲನೆಯಲ್ಲಿದೆ |
| 5 | 2018–19 | ಬೆಳಗಾವಿ ಜಿಲ್ಲೆಯ ಗೋಕಾಕ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ 24 ಕೆರೆಗಳನ್ನು ಮಾರ್ಕಂಡೇಯ ನದಿಯಿಂದ ನೀರು ತುಂಬಿಸುವ ಯೋಜನೆ | 65.00 | 4701 | ಗೋಕಾಕ | ಶ್ರೀ ರಮೇಶ ಲ ಜಾರಕಿಹೊಳಿ, ಶಾಸಕರು | ನಿಗಮದಲ್ಲಿ ಪರಿಶೀಲನೆಯಲ್ಲಿದೆ |
| 6 | 2018–19 | ಗಟ್ಟಿ ಬಸವಣ್ಣ ಏತ ನೀರಾವರಿ ಯೋಜನೆ | 250.00 | 4701 | ಗೋಕಾಕ | ಶ್ರೀ ರಮೇಶ ಲ ಜಾರಕಿಹೊಳಿ, ಶಾಸಕರು | ಡಿಪಿಆರ್ ತಯಾರಿಕಾ ಹಂತದಲ್ಲಿದೆ. |
| 7 | 2018–19 | ಹುಕ್ಕೇರಿ ತಾಲ್ಲೂಕಿನ ಶ್ರೀ ಅಡವಿ ಸಿದ್ಧೇಶ್ವರ ಏತ ನೀರಾವರಿ ಯೋಜನೆ | 66.13 | 4701 | ಹುಕ್ಕೇರಿ | ಶ್ರೀ.ಉಮೇಶ ವಿಶ್ವನಾಥ ಕತ್ತಿ, ಶಾಸಕರು | ಪರಿಶೀಲನೆಯಲ್ಲಿದೆ |

| | | | | | | | |
|---|---|---|---|---|---|---|---|
| 8 | 2018–19 | ಶ್ರೀ. ಶಂಕರಲಿಂಗ ಏತ ನೀರಾವರಿ ಯೋಜನೆ | 67.40 | 4701 | ಹುಕ್ಕೇರಿ | ಶ್ರೀ.ಉಮೇಶ ವಿಶ್ವನಾಥ ಕತ್ತಿ, ಶಾಸಕರು | ನಿಗಮದಲ್ಲಿ ಪರಿಶೀಲನೆಯಲ್ಲಿದೆ |
| 9 | 2018–19 | ಬೆಳಗಾವಿ ಜಿಲ್ಲೆ ಕಾಗವಾಡ ತಾಲೂಕಿನ 23 ಕೆರೆಗಳಿಗೆ ಕೃಷ್ಣಾ ನದಿಯಿಂದ ನೀರು ತುಂಬಿಸುವ ಯೋಜನೆ | 229.40 | 4701 | ಕಾಗವಾಡ | ಶ್ರೀ ಶ್ರೀಮಂತ ಬಾಳಾಸಾಹೇಬ ಪಾಟೀಲ, ಶಾಸಕರು | ಪರಿಶೀಲನೆಯಲ್ಲಿದೆ |
| 10 | 2018–19 | ಚಿಕ್ಕೋಡಿ ತಾಲ್ಲೂಕಿನ ಕಲ್ಲೋಳ್–ಯಡೂರು ರಸ್ತೆಯಲ್ಲಿ ಕೃಷ್ಣಾ ನದಿಗೆ ಬ್ರಿಡ್ಜ್–ಕಂ–ಬ್ಯಾರೇಜ್ ನಿರ್ಮಾಣ ಕಾಮಗಾರಿ | 35.00 | 4701 | ಚಿಕ್ಕೋಡಿ | ಶ್ರೀ ಮಹಾಂತೇಶ ಕವಟಗಿಮಠ, ಮುಖ್ಯ ಸಚೇತಕರು ಹಾಗೂ ವಿಧಾನ ಪರಿಷತ್ ಸದಸ್ಯರು | ಪರಿಶೀಲನೆಯಲ್ಲಿದೆ |
| 11 | 2018–19 | ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನ ಸಾಲಾಪೂರ ಏತ ನೀರಾವರಿ ಯೋಜನೆಯಡಿಯ 19 ಕೆರೆ ಯೋಜನೆ | 126.00 | 4701 | ರಾಮದುರ್ಗ | ಮಾನ್ಯ ಶ್ರೀ ಅಶೋಕ ಮ. ಪಟ್ಟಣ. | ಪರಿಶೀಲನೆಯಲ್ಲಿದೆ |

ಅನುಬಂಧ-2

ANNEXURE-2to LAQ No: 2206 of Sri Abheya Patil

Rs in Lakhs

| Head of Account | 2018-19 | | | | | 2017-18 | | | | | 2016-17 | | | | |
|---|---|---|---|---|---|---|---|---|---|---|---|---|---|---|---|
| | KNNL | KBJNL | CNNL | VJNL | TOTAL | KNNL | KBJNL | CNNL | VJNL | TOTAL | KNNL | KBJNL | CNNL | VJNL | TOTAL |
| AIBP | | | | | | 14098.00 | 18443.00 | | | 32541.00 | 19503.00 | 16722.74 | | | 36225.74 |
| AIBP -SCP | 2409.00 | 0.00 | | | 2409.00 | 3150.00 | 3426.00 | | | 6576.00 | 4050.00 | 3690.00 | | | 7740.00 |
| AIBP-TSP | 1446.00 | 0.00 | | | 1446.00 | 1074.00 | 1199.00 | | | 2273.00 | 1447.00 | 1319.00 | | | 2766.00 |
| CAPITAL GRANTS | 224507.00 | 56257.00 | 128260.00 | 102314.00 | 511338.00 | 96588.00 | 37499.99 | 82270.00 | 66796.00 | 283153.99 | 142234.00 | 42681.34 | 79555.66 | 10000.00 | 274471.00 |
| CAPITAL GRANTS-SCP | 44220.00 | 21835.00 | 44247.00 | 33516.00 | 143818.00 | 46416.00 | 41021.00 | 27342.00 | 44596.00 | 159375.00 | 50398.00 | 42949.54 | 28295.46 | 15300.00 | 136943.00 |
| CAPITAL GRANTS-TSP | 24127.00 | 9087.00 | 26251.00 | 16746.00 | 76211.00 | 17715.00 | 18891.00 | 12590.00 | 17020.00 | 66216.00 | 27668.00 | 21724.12 | 13979.88 | 7400.00 | 70772.00 |
| UNSPENT-SCP | | | | | | 1591.00 | | 2134.00 | | 3725.00 | 5458.00 | 1566.00 | 100.00 | | 7124.00 |
| UNSPENT-TSP | | | | | | | | 1387.00 | | 1387.00 | 2537.00 | 100.00 | 100.00 | | 2737.00 |
| SDP | 35902.68 | 3522.00 | 2500.00 | 2800.00 | 44724.68 | 24000.00 | 3000.00 | 2000.00 | 2500.00 | 31500.00 | 17000.00 | 1500.00 | 1500.00 | | 20000.00 |
| KISWARM-EAP | 6146.24 | 0.00 | 0.00 | | 6146.24 | 8055.99 | | | | 8055.99 | 2847.00 | | | | 2847.00 |
| DRIP-EAP | 8323.88 | 5620.50 | 4200.00 | | 18144.38 | 5467.00 | 8878.50 | 2798.50 | | 17144.00 | 2256.00 | 3606.00 | 4519.00 | | 10381.00 |
| NABARD | 335.00 | 1381.00 | 1696.00 | 107.33 | 3519.33 | 336.00 | 2089.00 | 1000.00 | 323.00 | 3748.00 | 1700.00 | 7843.24 | 200.00 | | 9743.24 |
| MAINTENANCE | 13826.00 | 5670.00 | 6197.00 | 99.00 | 25792.00 | 10128.00 | 5670.00 | 6196.00 | 3000.00 | 24994.00 | 12128.00 | 5670.00 | 6196.00 | 1000.00 | 24994.00 |
| NEW SCHEMES | | | | | | | | | | | 100.00 | | | | 100.00 |
| CAPITAL -LAQ R&R | 0.00 | 47100.00 | | | 47100.00 | | 108750.00 | | | 108750.00 | | 100232.00 | 24768.00 | | 125000.00 |
| CAPITAL -LAQ R&R-SCP | | 17771.33 | | | 17771.33 | | 20117.00 | | | 20117.00 | | | | | 0.00 |
| CAPITAL -LAQ R&R-TSP | | 6222.66 | | | 6222.66 | | 9883.00 | | | 9883.00 | | | | | 0.00 |
| IEBR | 78500.00 | 155281.00 | 53000.00 | 73500.00 | 360281.00 | 76500.00 | 150000.00 | 50000.00 | 73500.00 | 350000.00 | 80000.00 | 150000.00 | 40000.00 | 30000.00 | 300000.00 |
| DEBT SERVICE | 64865.71 | 125301.97 | 16581.00 | 23408.52 | 230157.20 | 51137.00 | 56550.64 | 13446.99 | 6746.10 | 127880.73 | 35712.92 | 43196.00 | 8601.00 | | 87509.92 |
| GUARANTEE COMMISSION | 3374.16 | 8742.13 | 2151.00 | 1131.57 | 15398.86 | 2901.63 | 6862.28 | 1935.70 | 378.00 | 12077.61 | 2309.29 | 4406.00 | 835.00 | | 7550.29 |
| TOTAL | 507982.67 | 463791.59 | 285083.00 | 253622.42 | 1510479.68 | 359157.62 | 492280.41 | 203100.19 | 214859.10 | 1269397.32 | 407348.21 | 447205.98 | 208650.00 | 63700.00 | 1126904.19 |

# ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 26 ಡಬ್ಲ್ಯೂಎಲ್ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:05.06.2020.

**ಇವರಿಂದ:**

ಸರ್ಕಾರದ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ,
ಬೆಂಗಳೂರು-560001.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು-560001.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1223ಕ್ಕೆ ಉತ್ತರ ಒದಗಿಸುವ ಬಗ್ಗೆ.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.1223/2020, ದಿ:05.03.2020.

------

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1223ಕ್ಕೆ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ಎಸ್.ಎನ್.ಕೇಶವಪ್ರಕಾಶ್)
ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ-4)
ಜಲಸಂಪನ್ಮೂಲ ಇಲಾಖೆ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1223
2. ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ)
3. ಉತ್ತರಿಸಬೇಕಾದ ದಿನಾಂಕ : 17.03.2020
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಇಂದಿನ ಸರ್ಕಾರವು ಎತ್ತಿನಹೊಳೆ ಮುಖ್ಯನಾಲೆಯ ಸರಪಳಿ 130 ರಿಂದ 210 ರವರೆಗೆ ಅಗತ್ಯವಿರುವ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳದೆ ಸಾವಿರಾರು ಕೋಟಿ ರೂ.ಗಳಿಗೆ ಟೆಂಡರ್ ಕರೆದಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಗುರುತ್ವ ಕಾಲುವೆಯ ಸರಪಳಿ 130.00 ರಿಂದ 160.00 ಕಿಮೀ ವರೆಗಿನ ಕಾಲುವೆ ಕಾಮಗಾರಿಗಳಿಗೆ 2018–19ನೇ ಸಾಲಿನಲ್ಲಿ ಟೆಂಡರ್ ಕರೆಯಲಾಗಿದೆ ಹಾಗೂ ಸರಪಳಿ 160.00 ರಿಂದ 210.00 ಕಿಮೀ ರವರೆಗಿನ ಕಾಲುವೆ ಕಾಮಗಾರಿಗಳಿಗೆ 2017–18ನೇ ಸಾಲಿನಲ್ಲಿ ಟೆಂಡರ್ ಕರೆಯಲಾಗಿದೆ. ವಿವರಗಳನ್ನು **ಅನುಬಂಧ–1**ರಲ್ಲಿ ಒದಗಿಸಲಾಗಿದೆ. ಸಮಾನಾಂತರವಾಗಿ ಸದರಿ ಸರಪಳಿಗಳಲ್ಲಿನ ಭೂಸ್ವಾಧೀನ ಪ್ರಕ್ರಿಯೆಯನ್ನು ಕೈಗೊಳ್ಳಲು ಕ್ರಮ ವಹಿಸಲಾಗಿದ್ದು, ಭೂಸ್ವಾಧೀನ ಪ್ರಕ್ರಿಯೆಯು ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುತ್ತದೆ. |
| ಆ) | ಎತ್ತಿನಹೊಳೆ ಮುಖ್ಯನಾಲೆಯ ಸರಪಳಿ 130 ರಿಂದ 210 ರವರೆಗೆ ಎಷ್ಟು ಕಾಮಗಾರಿಗಳನ್ನು ಪ್ಯಾಕೇಜ್ ಮಾಡಿ ಟೆಂಡರ್ ಕರೆಯಲಾಗಿದೆ; ಎಷ್ಟು ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸಿರುತ್ತಾರೆ ಹಾಗೂ ಎಷ್ಟು ಜನ ಗುತ್ತಿಗೆದಾರರು ಪೂರ್ವಾರ್ಹತೆ ಪರಿಶೀಲಿಸಿ ಅರ್ಹರ ಪಟ್ಟಿಯನ್ನು ತಯಾರಿಸಲಾಗಿದೆ; ಎಷ್ಟು ಜನ ಅರ್ಹರಾಗಿರುತ್ತಾರೆ ಹಾಗೂ ಆರ್ಥಿಕ ಬಿಡ್‌ಗೆ ಎಷ್ಟು ಜನರನ್ನು ಅರ್ಹಗೊಳಿಸಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಸರಪಳಿ 130 ರಿಂದ 210 ರವರೆಗೆ ಕಾಮಗಾರಿಗಳನ್ನು 10 ಪ್ಯಾಕೇಜ್‌ಗಳನ್ನಾಗಿ ಮಾಡಿ ಟೆಂಡರ್ ಕರೆಯಲಾಗಿರುತ್ತದೆ. ಸದರಿ ಟೆಂಡರ್‌ಗಳಲ್ಲಿ ಭಾಗವಹಿಸಿದ ಗುತ್ತಿಗೆದಾರರ ಸಂಖ್ಯೆ, ಪೂರ್ವಾರ್ಹತೆಯಲ್ಲಿ ಅರ್ಹಗೊಂಡ ಗುತ್ತಿಗೆದಾರರ ಸಂಖ್ಯೆಯ ವಿವರಗಳನ್ನು **ಅನುಬಂಧ–2**ರಲ್ಲಿ ಒದಗಿಸಲಾಗಿದೆ. |
| ಇ) | ಎತ್ತಿನಹೊಳೆ ಮುಖ್ಯನಾಲೆಯ ಸರಪಳಿ 130 ರಿಂದ 210 ರವರೆಗೆ ಅಗತ್ಯವಿರುವ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳದೆ ಟೆಂಡರ್ ಕರೆಯಲು ಕಾನೂನಿನಲ್ಲಿ ಅವಕಾಶವಿರುತ್ತದೆಯೇ; ಕಾನೂನಿನಲ್ಲಿ ಅವಕಾಶವಿಲ್ಲದೆ ಟೆಂಡರ್ ಕರೆದಿದ್ದಲ್ಲಿ ಅದಕ್ಕೆ ಯಾರು ಜವಾಬ್ದಾರರು; ಅಂತಹ ಅಧಿಕಾರಿಗಳ ವಿರುದ್ಧ ಯಾವ ಕ್ರಮ ಜರುಗಿಸಲಾಗಿದೆ; | ಭೂಸ್ವಾಧೀನ ಕಾಯ್ದೆಯಡಿ ಭೂಮಿಯನ್ನು ಸ್ವಾಧೀನ ಪಡೆಯುವುದನ್ನು ಕಾಯ್ದಿರಿಸಿ ಭೂಮಾಲೀಕರು ಕಾಮಗಾರಿ ನಿರ್ವಹಿಸಲು ಒಪ್ಪಿಗೆ ನೀಡಿದಲ್ಲಿ ಟೆಂಡರ್ ಕರೆದು ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಭೂಸ್ವಾಧೀನ ಕಾಯ್ದೆಯಡಿ ನಿರ್ದಿಷ್ಟವಾದ ನಿಬಂಧನೆ ಇರುವುದಿಲ್ಲ. ಸರ್ಕಾರ ಮತ್ತು ಯೋಜನೆಗೆ ಅರ್ಹ ಫಲಾನುಭವಿಗಳ ಹಿತದೃಷ್ಟಿಯಿಂದ ಈ ಕ್ರಮವನ್ನು ಸಾಮಾನ್ಯವಾಗಿ ರಾಜ್ಯದ ಎಲ್ಲಾ ಯೋಜನೆಗಳಲ್ಲೂ ಅನುಸರಿಸುತ್ತಿರುವುದು ವಾಸ್ತವವಾಗಿದೆ.<br><br>ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯಡಿಯಲ್ಲಿ ಭೂಸ್ವಾಧೀನ ಕಾಯ್ದೆ 2013ರನ್ವಯ ಭೂಸ್ವಾಧೀನವನ್ನು ಮಾಡಲಾಗುತ್ತಿದೆ. ಈ ಪ್ರಕ್ರಿಯೆಯಲ್ಲಿ ಸುಮಾರು ಎರಡರಿಂದ ಮೂರು ವರ್ಷ ಕಾಲ ವ್ಯಯವಾಗುತ್ತದೆ. ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯಡಿಯಲ್ಲಿ ಕುಡಿಯುವ ನೀರಿನ ತೀವ್ರ ಅಭಾವ ಎದುರಿಸುತ್ತಿರುವ ಜಿಲ್ಲೆಗಳಿಗೆ |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| | | ಕುಡಿಯುವ ನೀರಿನ ಸೌಲಭ್ಯ ಕಲ್ಪಿಸಲು ಹಾಗೂ ಕೆರೆ ತುಂಬಿಸಲು ಯೋಜಿಸಲಾಗಿದ್ದು, ಈ ಉದ್ದೇಶವನ್ನು ಸಫಲಗೊಳಿಸಲು ಯೋಜನೆಯ ಅನುಷ್ಠಾನದ ವಿಳಂಬವನ್ನು ತಡೆಯುವ ದೃಷ್ಠಿಯಿಂದ ಹಾಗೂ ಯೋಜನಾ ವೆಚ್ಚವು ಪ್ರತಿ ವರ್ಷ ಶೇಕಡ 5 ರಿಂದ 10 ರಷ್ಟು ಹೆಚ್ಚಾಗುವ ಸಂಭವವಿರುವುದರಿಂದ ಅವಶ್ಯವಿರುವ ಕಡೆ ಖಾಸಗಿ ಜಮೀನಿನಲ್ಲಿ ಗುತ್ತಿಗೆದಾರರು ರೈತರೊಂದಿಗೆ ತ್ರಿಪಕ್ಷೀಯ ಕರಾರು ಒಪ್ಪಂದ ಮಾಡಿಕೊಂಡು ಮತ್ತು ರೈತರಿಂದ ಒಪ್ಪಿಗೆ ಪಡೆದು ಕಾಮಗಾರಿ ನಿರ್ವಹಿಸಲು ಗುತ್ತಿಗೆ ಕರಾರಿನಲ್ಲಿ ಅವಕಾಶ ಕಲ್ಪಿಸಲಾಗಿರುತ್ತದೆ. ಇದರನ್ವಯ ಗುತ್ತಿಗೆದಾರರು ರೈತರ ಒಪ್ಪಿಗೆ ಪಡೆದು ಕಾಮಗಾರಿಗಳನ್ನು ನಿರ್ವಹಿಸುತ್ತಿದ್ದು, ಸಮಾನಂತರವಾಗಿ ಭೂಸ್ವಾಧೀನ ಪ್ರಕ್ರಿಯೆಯು ಕೂಡ ಪ್ರಗತಿಯಲ್ಲಿರುತ್ತದೆ. |
| ಈ) | ಎತ್ತಿನಹೊಳೆ ಮುಖ್ಯನಾಲೆಯ ಸರಪಳಿ 210ರ ನಂತರದ ಚೈನೈಜ್‌ಗಳಿಗೆ ಸಾವಿರಾರು ಕೋಟಿ ಮೊತ್ತದ ಕಾಮಗಾರಿಗಳಿಗೆ ಟೆಂಡರ್ ಕರೆದಿರುವುದು ನಿಜವೇ; ಹಾಗೂ ಎಷ್ಟು ಜನ ಗುತ್ತಿಗೆದಾರರ ಪೂರ್ವಾಹತೆ ಪರಿಶೀಲಿಸಿ ಅರ್ಹರ ಪಟ್ಟಿಯನ್ನು ತಯಾರಿಸಲಾಗಿದೆ; ಹಾಗೂ ಆರ್ಥಿಕ ಬಿಡ್‌ಗೆ ಎಷ್ಟು ಜನರನ್ನು ಅರ್ಹಗೊಳಿಸಲಾಗಿದೆ; (ಸಂಪೂರ್ಣ ಮಾಹಿತಿ ನೀಡಲಾಗಿದೆ) | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಸರಪಳಿ 210ರ ನಂತರ ಕಾಮಗಾರಿಗಳನ್ನು 06 ಪ್ಯಾಕೇಜ್ ಮಾಡಿ ಟೆಂಡರ್ ಕರೆಯಲಾಗಿರುತ್ತದೆ. ಸದರಿ ಟೆಂಡರ್‌ಗಳಲ್ಲಿ ಭಾಗವಹಿಸಿದ ಗುತ್ತಿಗೆದಾರರ ಸಂಖ್ಯೆ, ಪೂರ್ವಾರ್ಹತೆಯಲ್ಲಿ ಅರ್ಹಗೊಂಡ ಗುತ್ತಿಗೆದಾರರ ಸಂಖ್ಯೆಯ ವಿವರಗಳನ್ನು **ಅನುಬಂಧ–3**ರಲ್ಲಿ ಒದಗಿಸಲಾಗಿದೆ. |
| ಉ) | 2020–21ನೇ ಸಾಲಿನ ಆರ್ಥಿಕ ವರ್ಷದಲ್ಲಿ ಈ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯಲಾಗಿದೆ; ಸಹಮತಿ ಪಡೆಯದಿದ್ದಲ್ಲಿ ಈ ಕಾಮಗಾರಿಗಳನ್ನು ಯಾರ ಆದೇಶದ ಮೇರೆಗೆ ಕೈಗೊಳ್ಳಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ರೂ.12916.32 ಕೋಟಿ ಮೊತ್ತದ ಪರಿಷ್ಕೃತ ಯೋಜನಾ ವರದಿಗೆ 2013–14ನೇ ಸಾಲಿನಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ. ಇಲ್ಲಿಯವರೆಗೆ ಆಯವ್ಯಯದಲ್ಲಿ ಅನುವು ಮಾಡಿರುವ ಅನುದಾನಕ್ಕೆ ತಕ್ಕಂತೆ ಹಾಗೂ ಕುಡಿಯುವ ನೀರಿನ ತೀವ್ರ ಅಭಾವ ಎದುರಿಸುತ್ತಿರುವ ಬರಪೀಡಿತ ಜಿಲ್ಲೆಗಳ ಕುಡಿಯುವ ನೀರಿನ ಕೊರತೆಯನ್ನು ನೀಗಿಸಲು ಶೀಘ್ರವಾಗಿ ಕಾಮಗಾರಿಯನ್ನು ಪೂರ್ಣಗೊಳಿಸುವ ಅವಶ್ಯಕತೆಯನ್ನು ಮನಗಂಡು ಸದರಿ ಯೋಜನೆಯ ಕಾಮಗಾರಿಗಳಿಗೆ ಟೆಂಡರ್ ಕರೆಯಲಾಗಿದೆ. ಒಟ್ಟಾರೆಯಾಗಿ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಗೆ ಜನವರಿ 2020ರ ಅಂತ್ಯದವರೆಗೆ ರೂ.6584.96 ಕೋಟಿ ವೆಚ್ಚ ಮಾಡಲಾಗಿದೆ. |

**ಸಂಖ್ಯೆ: ಜಸಂಇ 26 ಡಬ್ಲ್ಯೂಎಲ್‌ಎ 2020**

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು
(ಬೃಹತ್ ಮತ್ತು ಮಧ್ಯಮ ನೀರಾವರಿ)

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1223ಗೆ ಅನುಬಂಧ-1**

ಸರಪಳಿ 130.00 ಕಿ.ಮೀ ರಿಂದ ಸರಪಳಿ 160.00 ಕಿಮೀ ವರೆಗಿನ ಕಾಲುವೆ ಕಾಮಗಾರಿಗಳ ವಿವರ

| ಪ್ಯಾಕೇಜ್ | ಗುತ್ತಿಗೆ ಮೊತ್ತ (ರೂ.ಕೊಟಿಗಳಲ್ಲಿ) | ಟೆಂಡರ್ ನೋಟಿಫಿಕೇಷನ್ ದಿನಾಂಕ: | ಗುತ್ತಿಗೆ ಕರಾರು ಮಾಡಿಕೊಂಡ ದಿನಾಂಕ |
|---|---|---|---|
| ಪ್ಯಾಕೇಜ್ 127.00 ರಿಂದ 137.00 ಕಿ.ಮೀ | 541.00 | 10-01-2019 | 08-03-2019/2018-19 |
| ಪ್ಯಾಕೇಜ್ 137.00 ರಿಂದ 140.00 ಕಿಮೀ | 203.69 | 05-02-2019 | 08-03-2019/2018-19 |
| ಪ್ಯಾಕೇಜ್:140.00 ರಿಂದ 146.00 ಕಿ.ಮೀ | 226.07 | 05-02-2019 | 08-03-2019/2018-19 |
| ಪ್ಯಾಕೇಜ್:146.00 ರಿಂದ 156.00 ಕಿ.ಮೀ | 106.92 | 05-02-2019 | 08-03-2019/2018-19 |
| ಪ್ಯಾಕೇಜ್:156.00 ರಿಂದ 161.00 ಕಿ.ಮೀ | 132.81 | 05-02-2019 | 08-03-2019/2018-19 |

ಸರಪಳಿ 160.00 ಕಿ.ಮೀ ರಿಂದ ಸರಪಳಿ 210.00 ಕಿಮೀ ವರೆಗಿನ ಕಾಲುವೆ ಕಾಮಗಾರಿಗಳ ವಿವರ

| ಪ್ಯಾಕೇಜ್ | ಗುತ್ತಿಗೆ ಮೊತ್ತ (ರೂ.ಕೋಟಿಗಳಲ್ಲಿ) | ಟೆಂಡರ್ ನೋಟಿಫಿಕೇಷನ್ ದಿನಾಂಕ: | ಗುತ್ತಿಗೆ ಕರಾರು ಮಾಡಿಕೊಂಡ ದಿನಾಂಕ |
|---|---|---|---|
| ಪ್ಯಾಕೇಜ್: 172.00 ರಿಂದ 182.00 ಕಿ.ಮೀ | 443.83 | 29-01-2018 | 12-03-2018/2017-18 |
| ಪ್ಯಾಕೇಜ್: 182.00 ರಿಂದ 198.00 ಕಿಮೀ | 180.25 | 29-01-2018 | 12-03-2019/2017-18 |
| ಪ್ಯಾಕೇಜ್: 198.00 ರಿಂದ 201.80 ಕಿ.ಮೀ | 235.39 | 27-11-2017 | 19-02-2018/2017-18 |
| ಪ್ಯಾಕೇಜ್: 201.80 ರಿಂದ 206.00 ಕಿ.ಮೀ | 429.15 | 27-11-2017 | 17-02-2018/2017-18 |
| ಪ್ಯಾಕೇಜ್: 206.00 ರಿಂದ 210.00 ಕಿ.ಮೀ | 344.92 | 27-11-2017 | 16-02-2018/2017-18 |

*****

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1223ಗೆ ಅನುಬಂಧ-2

| ಕ್ರ.ಸಂ | ಕಾಮಗಾರಿ ಹೆಸರು | ಭಾಗವಹಿಸಿದ ಬಿಡ್ಡುದಾರರ ಸಂಖ್ಯೆ | ಪೂರ್ವಾರ್ಹತೆ ಪೂರೈಸಿರುವ ಬಿಡ್ಡುದಾರರ ಸಂಖ್ಯೆ | ಆರ್ಥಿಕ ಬಿಡ್ ಗೆ ಅರ್ಹರಾದ ಬಿಡ್ಡುದಾರರ ಸಂಖ್ಯೆ | ಗುತ್ತಿಗೆ ಮೊತ್ತ (ರೂ.ಕೋಟಿಗಳಲ್ಲಿ) | ಗುತ್ತಿಗೆ ಕರಾರು ದಿನಾಂಕ ಮತ್ತು ವರ್ಷ |
|---|---|---|---|---|---|---|
| 1 | Construction of Gravity canal from Km 127.000 to Km 137.620 (Comprising of Earthwork Excavation, formation of Embankment, CC lining using Mechanical Paver including structures and Major Aqueduct from Km 134.980 to Km 137.620) under Yettinahole Project (YGC PKG XVIII) | 02 | 02 | 02 | 541.00 | 08.03.2019/ 2018-19 |
| 2 | Construction of Gravity canal from Km 137.620 to Km 140.700 (Comprising of Earthwork Excavation, formation of Embankment, CC lining using Mechanical Paver including structures and Major Aqueduct from Ch:137.620 km to Ch:139.510 km) under Yettinahole Project (YGC PKG XIX) | 02 | 02 | 02 | 203.69 | 08.03.2019/ 2018-19 |
| 3 | Construction of Gravity canal from Km 140.700 to Km 146.000 (Comprising of Earthwork Excavation, formation of Embankment, CC lining using Mechanical Paver including structures and Major Aqueduct from Ch:140.740 km to Ch:142.110 km) under Yettinahole Project (YGC PKG XX) | 02 | 1 | 1 | 226.07 | 08.03.2019/ 2018-19 |
| 4 | Construction of Gravity canal from Km 146.00 to Km 156.000 (Comprising of Earthwork Excavation, formation of Embankment, CC lining using Mechanical Paver including structures) under Yettinahole Project (YGC PKG XXI) | 02 | 02 | 02 | 106.92 | 08.03.2019/ 2018-19 |

| ಕ್ರಸಂ | ಕಾಮಗಾರಿ ಹೆಸರು | ಭಾಗವಹಿಸಿದ ಬಿಡ್ಡುದಾರರ ಸಂಖ್ಯೆ | ಪೂರ್ವಾರ್ಹತೆ ಪೂರೈಸಿರುವ ಬಿಡ್ಡುದಾರರ ಸಂಖ್ಯೆ | ಆರ್ಥಿಕ ಬಿಡ್ ಗೆ ಅರ್ಹರಾದ ಬಿಡ್ಡುದಾರರ ಸಂಖ್ಯೆ | ಗುತ್ತಿಗೆ ಮೊತ್ತ (ರೂ.ಕೋಟಿಗಳಲ್ಲಿ) | ಗುತ್ತಿಗೆ ಕರಾರು ದಿನಾಂಕ ಮತ್ತು ವರ್ಷ |
|---|---|---|---|---|---|---|
| 5 | Construction of Gravity canal from Km 156.000 to Km 161.203 (Comprising of Earthwork Excavation, formation of Embankment, CC lining using Mechanical Paver including structures and Major Aqueduct from Ch:157.350 km to Ch:157.980 km) under Yettinahole Project (YGC PKG XXII) | 02 | 02 | 02 | 132.81 | 08.03.2019 / 2018-19 |
| 6 | Construction of Gravity canal from Km 198.000 to Km 199.620 (Comprising of Excavation, formation of Embankment, CC lining using Mechanical Paver including structures) and Construction of Major Aqueduct from Km 199.620 to Km 201.880 with required discharge of 93.50 cumecs under Yettinahole Project (Package-I) | ,03 | 02 | 02 | 235.39 | 19.02.2018/ 2017-18 |
| 7 | Construction of Major Aqueduct of yettinahole Gravity Main Canal from Km 201.880 to Km 206.350 with required discharge of 93.50 Cumes under Yettinahole Project (Package II) | 02 | 02 | 02 | 429.15 | 17.02.2018/ 2017-18 |
| 8 | Construction of Major Aqueduct from Km.206.350 to Km 210.090 with required discharge under of 93.50 cumecs under Yettinahole project (YGC Package III) | ,03 | 02 | 02 | 344.92 | 16.02.2018/ 2017-18 |
| 9 | Construction of Gravity Canal From Km 170.287 to Km 177.270 and Km 182.220 to Km 182.500 (Comprising of Excavation, formation of Embankment, CC Lining using Mechanical Paver Including Structure) and Major Aqueduct From Km 182.220 under Yettinahole Project (YGC Package-XI) | 02 | 02 | 02 | 443.83 | 12.03.2018/ 2017-18 |
| 10 | Construction of gravity canal from Km.182.500 to Km 182.530 and Km 183.210 to Km 198.000 (Comprising of Excavation, formation of Embankment,CC lining using Mechanical paver including structures) and Aqueduct from Km 182.530 to Km 183.210 under yettinahole Project (YGC Package XII) | 02 | 02 | 02 | 180.25 | 12.03.2018/ 2017-18 |

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1223ಗೆ ಅನುಬಂಧ-3

| ಕ್ರ.ಸಂ | ಕಾಮಗಾರಿ ಹೆಸರು | ಭಾಗವಹಿಸಿದ ಬಿಡ್ಡುದಾರರ ಸಂಖ್ಯೆ | ಪೂರ್ವಾಹತೆ ಪೂರೈಸಿರುವ ಬಿಡ್ಡುದಾರರ ಸಂಖ್ಯೆ | ಆರ್ಥಿಕ ಬಿಡ್ಡಿಗೆ ಅರ್ಹರಾದ ಬಿಡ್ಡುದಾರರ ಸಂಖ್ಯೆ | ಗುತ್ತಿಗೆ ಮೊತ್ತ (ರೂ.ಕೋಟಿಗಳಲ್ಲಿ) | ಗುತ್ತಿಗೆ ಕರಾರು ಮಾಡಕೊಂಡ ದಿನಾಂಕ |
|---|---|---|---|---|---|---|
| 1 | Costruction of Gravity Canal From Km 210.00 to Km 222.00 Comparising of Excavation, formation of Embankment, CC lining using Mechanical paverincluding structures and Aqueduct from Km 219.420 to Km 221.740 under yettinahole Project (YGC Package XIII) | 02 | 02 | 02 | 315.21 | 12-03-2018/ 2017-18 |
| 2 | Construction of gravity canal from Km 220.00 to Km 240.00 Comprising of Earthwork Excavation of Embankment, CC lining using Mechanical paver, including construction CD works and other structures under Yettinahole Project (PKG XIV) | 03 | 02 | 02 | 246.66 | 31-10-2018/ 2018-19 |
| 3 | Construction of Gravity Canal from Km 240.00 to Km 244.35 comprising of Earthwork Excavation, Formation of Embankment, CC Lining using Mechanical Paver, including construction of CD works, Aqueducts and other structures under Yettinahole Project. (PKG XXIII) | 02 | 02 | 02 | 441.83 | 20-12-2019/ 2019-20 |
| 4 | Construction of Gravity Canal from Km 244.35 to Km 249.15 comprising of Earthwork Excavation, Formation of Embankment, CC Lining using Mechanical Paver, including construction of CD works, Tunnels, Aqueducts and other structures under Yettinahole Project. (PKG XXIV) | 02 | 02 | 02 | 145.20 | 23-12-2019/ 2019-20 |
| 5 | Construction of Gravity Canal from Km 249.15 to Km 255.00 comprising of Earthwork Excavation, Formation of Embankment, CC Lining using Mechanical Paver, including construction of CD works, Tunnels and other structures under Yettinahole Project. (PKG XXV) | 06 | 04 | 03 | 158.55 | 22-01-2020/ 2019-20 |
| 6 | Construction of Gravity Canal from Km 255.00 to Km 258.97 comprising of Earthwork Excavation, Formation of Embankment, CC Lining using Mechanical Paver, including construction of CD works, Tunnels, Aqueducts and other structures under Yettinahole Project. (PKG XXVI) | 05 | 03 | 02 | 117.84 | 23-12-2019/ 2019-20 |

# ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 28 ಡಬ್ಲ್ಯೂಎಲ್ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:05.06.2020.

**ಇವರಿಂದ:**

ಸರ್ಕಾರದ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ,
ಬೆಂಗಳೂರು-560001.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು-560001.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಬೆಳ್ಳಿಪ್ರಕಾಶ್ (ಕಡೂರು) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2202ಕ್ಕೆ ಉತ್ತರ ಒದಗಿಸುವ ಬಗ್ಗೆ.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.2202/2020, ದಿ:04.03.2020.

------

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಬೆಳ್ಳಿಪ್ರಕಾಶ್ (ಕಡೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2202ಕ್ಕೆ ಉತ್ತರದ 20 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ಎಸ್.ಎನ್.ಕೇಶವಪ್ರಕಾಶ್)
ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ-4)
ಜಲಸಂಪನ್ಮೂಲ ಇಲಾಖೆ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2202
2. ಸದಸ್ಯರ ಹೆಸರು : ಶ್ರೀ ಬೆಳ್ಳಿಪ್ರಕಾಶ್ (ಕಡೂರು)
3. ಉತ್ತರಿಸಬೇಕಾದ ದಿನಾಂಕ : 17.03.2020
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹಿರಿಯೂರು ತಾಲ್ಲೂಕು, ವಾಣಿ ವಿಲಾಸ ಸಾಗರಕ್ಕೆ ಭದ್ರಾ ಮೇಲ್ದಂಡೆ ಯೋಜನೆಯಿಂದ ಪ್ರಾಯೋಗಿಕವಾಗಿ ಕಾಲುವೆ ಮೂಲಕ ನೀರು ಹರಿಸಿದಾಗ ರೈತರ ಬೆಳೆಗೆ ಆದ ನಷ್ಟವು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಸರ್ಕಾರ ಈ ಬಗ್ಗೆ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ರೈತರ ಬೆಳೆಗಳಿಗೆ ಆದ ನಷ್ಟವನ್ನು ಉಪವಿಭಾಗಾಧಿಕಾರಿಗಳು, ತರೀಕೆರೆ ಉಪವಿಭಾಗ, ತರೀಕೆರೆ ಇವರಿಂದ ಸಮೀಕ್ಷೆ ಮಾಡಿಸಲಾಗಿದ್ದು, ಸದರಿಯವರು ಸರ್ಕಾರದ ಸುತ್ತೋಲೆಯಂತೆ ಮಳೆಯಾಶ್ರಿತ ಕೃಷಿ ತೋಟಗಾರಿಕೆ ಮತ್ತು ವಾರ್ಷಿಕ ಬೆಳೆಗಳ ಬಿತ್ತನೆಗೆ ಅನುಗುಣವಾಗಿ ಎಸ್.ಡಿ.ಆರ್.ಎಫ್/ನಬಾರ್ಡ್ ಗೈಡ್ ಲೈನ್ಸ್ ಪ್ರಕಾರ ಪ್ರತಿ ಹೆಕ್ಟೇರ್‌ಗೆ ರೂ.6800.00 ಗರಿಷ್ಠ ಪರಿಹಾರ ನೀಡಲು ಅವಕಾಶವಿರುತ್ತದೆ ಎಂದು ತಿಳಿಸಿದ್ದು, ಅದರಂತೆ ಒಟ್ಟು 224 ಖಾತೆದಾರರ 283 ಎಕರೆ 39 ಗುಂಟೆ ಪ್ರದೇಶಕ್ಕೆ ಒಟ್ಟು ರೂ.7,81,461.80ಗಳನ್ನು ಪಾವತಿ ಮಾಡಲು ಕ್ರಮಕೈಗೊಳ್ಳಲಾಗುತ್ತಿದೆ. |
| ಇ) | ಕಡೂರು ಕ್ಷೇತ್ರದ ಕುಕ್ಕಸಮುದ್ರ ಕೆರೆಯ ಕೋಡಿ ಸಂಪೂರ್ಣ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ಕೆರೆಯು ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಗೆ ಒಳಪಡುತ್ತದೆ. ಸಣ್ಣ ನೀರಾವರಿ ಇಲಾಖೆಯು ಚಿಕ್ಕಮಗಳೂರು ಜಿಲ್ಲೆ ಕಡೂರು ಕ್ಷೇತ್ರದ ಕುಕ್ಕಸಮುದ್ರ ಕೆರೆಯ ಕೋಡಿಗೆ ಯಾವುದೇ ಹಾನಿಯಾಗಿರುವುದಿಲ್ಲ. ಪ್ರಸ್ತುತ ಈ ಕೆರೆಗೆ ಎರಡು ಕೋಡಿಗಳು ಇದ್ದು, ಅಕಾಲಿಕ ಮಳೆಯಿಂದಾಗಿ ಯಥೇಚ್ಛವಾಗಿ ಒಳ ಹರಿವಿನ ಪ್ರಮಾಣ ಹೆಚ್ಚಾಗಿದ್ದು, ಕೆರೆಯ ಏರಿ ಭಾಗಶಃ ಹಾಳಾಗಿರುತ್ತದೆ. ಆದ್ದರಿಂದ ಕುಕ್ಕಸಮುದ್ರ ಕೆರೆಗೆ ಹೆಚ್ಚಿನ ಪ್ರಮಾಣದಲ್ಲಿ ಮಳೆಯಾದ ಸಂದರ್ಭದಲ್ಲಿ ಪ್ರಸ್ತುತ ಇರುವ ಕೋಡಿಗಳಲ್ಲಿ ಹೆಚ್ಚಿನ ಪ್ರಮಾಣದ ನೀರಿನ ಹೊರ ಹರಿಯುವಿಕೆಗೆ ಅವಕಾಶವಿಲ್ಲದ ಕಾರಣ ಸದರಿ ಕೆರೆಗೆ ಹೆಚ್ಚುವರಿಯಾಗಿ ಒಂದು ಕೋಡಿ ನಿರ್ಮಾಣದ ಅವಶ್ಯಕತೆ ಇರುತ್ತದೆ ಎಂದು ತಿಳಿಸಿರುತ್ತದೆ. |
| ಈ) | ಬಂದಿದ್ದಲ್ಲಿ, ಸರ್ಕಾರ ಈ ಬಗ್ಗೆ ಯಾವ ಕ್ರಮಕೈಗೊಂಡಿದೆ? (ವಿವರ ನೀಡುವುದು) | |

**ಸಂಖ್ಯೆ: ಜಸಂಇ 28 ಡಬ್ಲ್ಯೂಎಲ್ಎ 2020**

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು
(ಬೃಹತ್ ಮತ್ತು ಮಧ್ಯಮ ನೀರಾವರಿ)

<u>**ಕರ್ನಾಟಕ ಸರ್ಕಾರ**</u>

ಸಂಖ್ಯೆ: ಮೂಅಇ 47 ರಾರಾಹೆ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:27.05.2020

ಇವರಿಂದ,
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ,
ಬೆಂಗಳೂರು.

D - 17/3/20
UN Starred

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ**: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2114 ಕ್ಕೆ ಉತ್ತರ ಒದಗಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ 2114 ಕ್ಕೆ ಸಂಬಂಧಿಸಿದ 10 ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

**(ಪಾಪಣ್ಣ)**,
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.
27/5

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2114 |
| 2) | ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ |
| 3) | ಉತ್ತರಿಸಬೇಕಾದ ದಿನಾಂಕ | : | 17.03.2020 |
| 4) | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೈಲಹೊಂಗಲ ಮತಕ್ಷೇತ್ರದಲ್ಲಿ ಬರುವ ಬೆಳವಡಿ ಗ್ರಾಮದ ವೀರರಾಣಿ ಬೆಳವಡಿ ಮಲ್ಲಮ್ಮನ ಇಡೀ ದೇಶದಲ್ಲಿಯೇ ಮೊದಲ ಮಹಿಳಾ ಸೈನ್ಯ ಸ್ಥಾಪಿಸಿರುವುದು ನಿಜವಲ್ಲವೇ; | ಹೌದು |
| ಆ) | ಬೆಳವಡಿ ಮಲ್ಲಮ್ಮನ ಇತಿಹಾಸದಲ್ಲಿ ಇಂದಿನ ಪೀಳಗೆಗೆ ತಿಳಿಸುವುದು ಸರ್ಕಾರದ ಕೆಲಸವಲ್ಲವೇ; | ಹೌದು, 10ನೇ ತರಗತಿ ಕನ್ನಡ ತೃತೀಯ ಭಾಷೆ ಪಠ್ಯಪುಸ್ತಕದಲ್ಲಿ ಕರ್ನಾಟಕದ ವೀರವನಿತೆಯರು ಎಂಬ 9ನೇ ಪಾಠದಲ್ಲಿ ಬೆಳವಡಿ ಮಲ್ಲಮ್ಮನ ಇತಿಹಾವನ್ನು ತಿಳಿಸಲಾಗುತ್ತಿದೆ. (ಅನುಬಂಧ ಲಗತ್ತಿಸಿದೆ) |
| ಇ) | ಬೆಳಗಾವಿಯಿಂದ ಬೆಂಗಳೂರಿಗೆ ಪ್ರಾರಂಭಿಸಲಾದ ರೈಲಿಗೆ ವೀರರಾಣಿ ಬೆಳವಡಿ ಮಲ್ಲಮ್ಮನ ಹೆಸರಿಡಬೇಕೆಂದು ಆ ಭಾಗದ ಜನಪ್ರತಿನಿಧಿಗಳು ಮನವಿ ಸಲ್ಲಿಸಿರುವುದು ನಿಜವಲ್ಲವೇ; | ಬೆಳಗಾವಿ ಭಾಗದ ಜನಪ್ರತಿನಿಧಿಗಳಿಂದ ಇಲಾಖೆಯಲ್ಲಿ ಯಾವುದೇ ಮನವಿ ಸ್ವೀಕೃತವಾಗಿರುವುದಿಲ್ಲ. |
| ಈ) | ಹಾಗಿದ್ದಲ್ಲಿ, ಸದರಿ ಬೆಳಗಾವಿ-ಬೆಂಗಳೂರು ರೈಲಿಗೆ ವೀರರಾಣಿ ಬೆಳವಡಿ ಮಲ್ಲಮ್ಮನ ಹೆಸರಿಡುವ ಪ್ರಸ್ತಾವನೆಯನ್ನು ಕೇಂದ್ರ ಸರ್ಕಾರಕ್ಕೆ ಯಾವಾಗ ಕಳುಹಿಸಲಾಗುವುದು. | ಅನ್ವಯಿಸುವುದಿಲ್ಲ. |

ಸಂಖ್ಯೆ: ಮೂಅಇ 47 ರಾರಾಹೆ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

# ೯. ಕರ್ನಾಟಕದ ವೀರ ವನಿತೆಯರು

– ಡಾ॥ ವಿಜಯಲಕ್ಷ್ಮಿ ಬಾಳೇಕುಂದ್ರಿ

ಪ್ರವೇಶ: ಕನ್ನಡ ನಾಡು ವೀರವನಿತೆಯರ ಬೀಡು. ಪ್ರಾಣವನ್ನು ಒತ್ತೆಯಿಟ್ಟು ಧೈರ್ಯ ಸ್ವಾಭಿಮಾನದಿಂದ ಹೋರಾಡಿದ ವೀರ ಮಹಿಳೆಯರಿಗೆ ನಾಡಿನಲ್ಲಿ ಕೊರತೆಯಿಲ್ಲ. ನಾಡಿನ ಹಿತಕ್ಕೆ ಧಕ್ಕೆ ಬಂದಾಗ ತಮ್ಮೆಲ್ಲಾ ವೈಯಕ್ತಿಕ ಆಸೆಗಳನ್ನೂ ಬದಿಗಿಟ್ಟು ಅವರು ಹೋರಾಡಿದ್ದಾರೆ. ತಮ್ಮ ದುಡಿಮೆ ತ್ಯಾಗದ ಬಲದಿಂದ ನಾಡನ್ನು ಕಟ್ಟಿದ್ದಾರೆ. ಕನ್ನಡ ನಾಡನ್ನು ವಿದೇಶಿಯರಿಂದ ಉಳಿಸಿದ ಹಾಗೂ ಕಟ್ಟಿದ ವೀರ ವನಿತೆಯರ ಸಾಹಸ ಗಾಥೆಯನ್ನು ಈ ಲೇಖನವು ಬಿತ್ತರಿಸುತ್ತದೆ.

ಕರ್ನಾಟಕದಲ್ಲಿ ಕೆಚ್ಚೆದೆಯಿಂದ ಕತ್ತಿ ಝಳಪಿಸಿ ವಿಜಯಿಗಳಾಗಿ ವಿಜೃಂಭಿಸಿದ ವೀರವನಿತೆಯರ ಸಂಗತಿ ನೆನೆಸಿಕೊಂಡರೆ ಮೈನವಿರೇಳುತ್ತದೆ. ಉದಾಹರಣೆಗೆ ದಕ್ಷಿಣಕನ್ನಡದ ಉಲ್ಲಾಳದ ರಾಣಿ ಅಬ್ಬಕ್ಕದೇವಿ (೧೫೫೦–೧೬೭೫). ಪೋರ್ಚುಗೀಸರು ಭಾರೀ ನೌಕೆಯಲ್ಲಿ ಬಲಾಢ್ಯ ಪಡೆಯೊಂದಿಗೆ ಆಕ್ರಮಣಕ್ಕೆ ಸಜ್ಜಾಗಿ ಉಲ್ಲಾಳದ ಕರಾವಳಿಯಲ್ಲಿ ಲಂಗರು ಹಾಕಿದರಂತೆ. ಆಗ ರಾಣಿ ಅಬ್ಬಕ್ಕದೇವಿಯ ಮೊಗೇರು ಎಂಬ ಮೀನುಗಾರ ಸಾಹಸಿ ಸೈನಿಕರು ಕರಾಳ ರಾತ್ರಿಯಲ್ಲಿ ಸದ್ದು ಗದ್ದಲವಿಲ್ಲದ ನೂರಾರು ಸಣ್ಣ ದೋಣಿಗಳಲ್ಲಿ ಹೋಗಿ, ಸಾವಿರಾರು ತೆಂಗಿನಗರಿಯ ಉರಿಯುವ ದೀವಟಿಗೆಗಳನ್ನು ಕ್ಷಣಾರ್ಧದಲ್ಲಿ ಪೋರ್ಚುಗೀಸ ನೌಕೆಯ ಮೇಲೆಸೆದರಂತೆ ಧಗಧಗನೆ ಉರಿಯುವ ನೌಕೆಯಿಂದ ದಿಕ್ಕೆಟ್ಟ ಪೋರ್ಚುಗೀಸ ಸೈನಿಕರು ಸಾವಿನಿಂದ ಪಾರಾಗಲು ಸಮುದ್ರಕ್ಕೆ ಹಾರಿದಾಗ, ಅಬ್ಬಕ್ಕದೇವಿಯ ಸೈನಿಕರ ಖಡ್ಗ, ಈಟಿಗಳಿಗೆ ಬಲಿಯಾದರು. ಶತ್ರು ಪೋರ್ಚುಗೀಸರ ಹಡಗನ್ನು ಮುಳುಗಿಸಿ, ಮಿರಾಂಡಾ ಮತ್ತು ಡಿ ಮೆಲ್ಲೊ ಎಂಬ ಸೇನಾಪತಿಗಳನ್ನು ಓಡಿಸಿ ಸಪ್ತ ಸಮುದ್ರದಾಚೆ ವಿಖ್ಯಾತಳಾದಳು ವೀರ ರಾಣಿ ಅಬ್ಬಕ್ಕದೇವಿ! ತನ್ನ ಪ್ರೀತಿಯ ಪ್ರಜೆಗಳಾದ ರೈತರು ಕಷ್ಟಪಟ್ಟು, ಬೆವರು ಸುರಿಸಿ ಬೆಳೆದ ಏಲಕ್ಕಿ, ಅಕ್ಕಿ, ಮೆಣಸಿನ ಕಾಳು ಮತ್ತು ನೇಕಾರರು ನೇಯ್ದ ಬಟ್ಟೆಯ ವ್ಯಾಪಾರಕ್ಕೆ ಬಂದ ಪೋರ್ಚುಗೀಸರು ಕೇಳಿದ ಬೆಲೆಗೆ ಕೊಡಲು ಅಬ್ಬಕ್ಕದೇವಿ ಒಪ್ಪಲಿಲ್ಲ. ಅನ್ಯಾಯವಾಗಿ ಪೋರ್ಚುಗೀಸರು ಪಡೆಯುತ್ತಿದ್ದ ವಾರ್ಷಿಕ ಕಪ್ಪವನ್ನು ವಿರೋಧಿಸಿದಳು. ಅವರ ಆರ್ಥಿಕ ಶೋಷಣೆಗೆ ತಲೆಬಾಗದ ಸ್ವಾಭಿಮಾನಿ ರಾಣಿ ಅಬ್ಬಕ್ಕದೇವಿ ವಿವೇಚನಾಶೀಲಳೂ, ನ್ಯಾಯಪರಳೂ, ಕುಶಲಳೂ ಆಗಿದ್ದಳೆಂದು ಜಿನೋವದ (ಇಟಲಿಯ) ಪ್ರವಾಸಿ ಪಿತ್ರೋ ಬರೆದಿದ್ದಾನೆ. ಬಾಗ್ದಾದಿನ ದೊರೆ ಷಾ ಅಬ್ಬಾಸ್‌ರನ್ನು ಅವನು ಭೇಟಿಯಾದಾಗ ಅವರು ರಾಣಿ ಅಬ್ಬಕ್ಕ ಪೋರ್ಚುಗೀಸರನ್ನು ಪಲಾಯನಗೈಯುವಂತೆ ಮಾಡಿದ್ದನ್ನು ವಿವರಿಸಿ "ಭಾರತಕ್ಕೆ ಹೋದರೆ ರಾಣಿಯನ್ನು ಭೇಟಿಯಾಗದೆ ಬರಬೇಡಿ" ಎಂದು ಹೇಳಿದ್ದರಂತೆ! ಆದ್ದರಿಂದ ರಾಣಿಯನ್ನು ನೋಡಿ ಪಿತ್ರೋ ಸಂತಸದಿಂದ "ವಿಶ್ವವಿಖ್ಯಾತರಾದ ನಿಮ್ಮನ್ನು ನೋಡಲು ಅಷ್ಟು ದೂರದಿಂದ ಬಂದದ್ದು ಸಾರ್ಥಕವಾಯಿತು" ಎಂದಾಗ ಪ್ರಸನ್ನಳಾದ ರಾಣಿ ಅಬ್ಬಕ್ಕದೇವಿ "ಅಪರಿಚಿತವಾದ ಈ ದೇಶದಲ್ಲಿ ಸುತ್ತಾಡುವಾಗ ಏನಾದರೂ ರೋಗರುಜಿನ ಬಂದರೆ ಒಬ್ಬಂಟಿಗರಾದ ನಿಮ್ಮನ್ನು ನೋಡುವವರ್‍ಯಾರು?" ಎಂದು ಸ್ತ್ರೀ ಸಹಜವಾದ ವಾತ್ಸಲ್ಯದಿಂದ ವಿಚಾರಿಸಿಕೊಂಡಳೆಂದು ಪಿತ್ರೋ ಬರೆದಿದ್ದಾನೆ.

ಉಲ್ಲಾಳದ ರಾಣಿ ಅಬ್ಬಕ್ಕದೇವಿ ಪರದೇಶದ ಪೋರ್ಚುಗೀಸರನ್ನು ಸೋಲಿಸಿದರೆ, ಬೆಳಗಾವಿ ಜಿಲ್ಲೆಯ ಆಜೇಯ ಬೆಳವಡಿ ಮಲ್ಲಮ್ಮಾಜಿ ಪಕ್ಕದ ರಾಜ್ಯದ ಪರಾಕ್ರಮಿ ಛತ್ರಪತಿ ಶಿವಾಜಿ ಮಹಾರಾಜರನ್ನು ಸೋಲಿಸಿದ

ಅಪ್ರತಿಮ ಪರಾಕ್ರಮ! ಕರ್ನಾಟಕದ ಮೇಲೆ ದಂಡಯಾತ್ರೆ ಪ್ರಾರಂಭಿಸಿದ ಶಿವಾಜಿ ಬೆಳವಡಿ ಸಂಸ್ಥಾನದ ಯಾದವಾಡದಲ್ಲಿ ಪಾಳೆಯ ಹೂಡಿದ. ಶಿವಾಜಿಯ ಸೈನಿಕರು ಸುತ್ತಮುತ್ತಲಿನ ಹಳ್ಳಿಗರ ಹಸು, ಎಮ್ಮೆಗಳನ್ನು ಅಪಹರಿಸಿಕೊಂಡು ಹೋಗಿ ಅವರಿಗೆ ಕಿರುಕುಳ ಕೊಡುವುದನ್ನು ಕೇಳಿ ಕಿಡಿಕಿಡಿಯಾದ ಬೆಳವಡಿಯ ದೇಸಾಯಿ ಈಶಪ್ರಭುಗಳಿಗೆ ಸಮಾಧಾನ ಹೇಳಿ ೨೦೦೦ ಸ್ತ್ರೀಯರುಳ್ಳ ಸೈನ್ಯದೊಂದಿಗೆ ಹೋದಳು. ಸ್ತ್ರೀ ಸೈನಿಕರನ್ನು ಕಂಡು ಅಪಹಾಸ್ಯ ಮಾಡಿದ ಸೈನಿಕರನ್ನು ಕೊಚ್ಚಿ ಹಾಕಿದ ಮಲ್ಲಮ್ಮಾಜಿಯ ಕಾಳಿರೂಪವನ್ನು ಕಂಡು ಕಂಗೆಟ್ಟ ಸೈನಿಕರು ಜಾನುವಾರುಗಳನ್ನು ಹಿಂದಿರುಗಿಸಿದರು. ಹಳ್ಳಿಗರು ಸಂತಸದಿಂದ ವಿಜಯೋತ್ಸವ ಆಚರಿಸಿದ್ದನ್ನು ಗಂಡನಿಗೆ ತಿಳಿಸಲು ಸಂಭ್ರಮದಿಂದ ಬಂದ ಮಲ್ಲಮ್ಮಾಜಿಗೆ ಆಘಾತವಾಯಿತು. ಮಲ್ಲಮ್ಮಾಜಿ ಅತ್ತ ಹೋದಾಗ ಇತ್ತ ೧೦,೦೦೦ ಮರಾಠ ಸೈನಿಕರು ಕೋಟೆಗೆ ಮುತ್ತಿಗೆ ಹಾಕಿ ಈಶಪ್ರಭುಗಳನ್ನು ತೀವ್ರವಾಗಿ ಗಾಯಗೊಳಿಸಿದ್ದರು. "ರಾಣಿ ನಿಮ್ಮ ಪರಾಕ್ರಮದ ಪರಿಚಯ ನಮಗಿದೆ. ಶಿವಾಜಿಯನ್ನು ನೀವು ಸೋಲಿಸಬೇಕು, ಹಾಗೆ ಮಾಡುತ್ತೀರೆಂದು ನನ್ನ ಕೈ ಮೇಲೆ ಕೈ ಇಟ್ಟು ಪ್ರಮಾಣ ಮಾಡಿ" ಎಂದು ಹೆಂಡತಿಯನ್ನು ಈಶಪ್ರಭುಗಳು ಕೇಳಿಕೊಂಡರು. ಒಂದು ಸಲ ವಿಹಾರಕ್ಕೆ ಹೋದಾಗ ಈಶಪ್ರಭು ನಿದ್ರಿಸಿದಾಗ ಬಂದ ಎರಡು ಹುಲಿಗಳನ್ನು ಸಾಯಿಸಿದ ಮಲ್ಲಮ್ಮಾಜಿಯ ಪರಾಕ್ರಮದಲ್ಲಿ ಅಪಾರ ನಂಬಿಕೆ ಇದ್ದ ಈಶಪ್ರಭುಗಳ ಪ್ರಾಣಪಕ್ಷಿ ರಾಣಿಯ ಆಶ್ವಾಸನೆ ಸಿಗುತ್ತಿದ್ದಂತೆ ಹಾರಿಹೋಯಿತು.

ದುಃಖಿತಪ್ತಳಾದ ರಾಣಿ ಮಲ್ಲಮ್ಮಾಜಿ ಧೃತಿಗೆಡದೆ ಗಂಡನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಶಕ್ತಿಯ ಜೊತೆಗೆ ಯುಕ್ತಿಯಿಂದ ದಿಟ್ಟ ಹೆಜ್ಜೆ ಇಟ್ಟಳು. ಬೆಳವಡಿಯ ಸರದಾರ ಶಾಂತಯ್ಯನನ್ನು ಸಂನ್ಯಾಸಿಯ ವೇಷದಲ್ಲಿ ಶಿವಾಜಿಯ ಹತ್ತಿರ ಕಳುಹಿಸಿದಳು. ಅವನು "ಸಿದ್ಧ ಸಮುದ್ರದಲ್ಲಿರುವ ದ್ಯಾಮವ್ವ ಎಂಬ ಜಾಗೃತ ಜಗದಾಂಬೆ ದೇವಿಯ ದರ್ಶನ ಪಡೆದರೆ ಉತ್ತಮ" ಎಂದು ತಿಳಿಸಿದ. ಈ ಸೂಚನೆಗೆ ಶಿವಾಜಿ ಒಪ್ಪಿದನು. ಇತ್ತ ರಾಣಿ ಮಲ್ಲಮ್ಮಾಜಿ ತನ್ನ ಪುಟ್ಟ ಮಗ ನಾಗಭೂಷಣನನ್ನು ಕರೆದುಕೊಂಡು ಗದ್ಗದಿತ ಕಂಠದಿಂದ ಪ್ರಜೆಗಳಿಗೆ "ಇದು ನಮ್ಮ ಕೊನೆಯ ಭೇಟಿ" ಎಂದು ಹೇಳಿ ಪತಿ ಈಶಪ್ರಭುವಿನ ಕಿರೀಟ ಧರಿಸಿ ಅರಸನ ಕುದುರೆ ಏರಿ ಗುಪ್ತಮಾರ್ಗದಿಂದ ತನ್ನ ಸ್ತ್ರೀ ಸೈನ್ಯದೊಡನೆ ಮುನ್ನಡೆದಳು. ೮-೧೦ ಸರದಾರರೊಂದಿಗೆ ಜಗದಾಂಬೆಯ ದರ್ಶನ ಪಡೆದು ಮರಳುತ್ತಿದ್ದ ಶಿವಾಜಿಯ ಮೇಲೆ ಮಿಂಚಿನಂತೆ ಎರಗಿ ಖಡ್ಗದ ಹೊಡೆತದಿಂದ ಅವರನ್ನೆಲ್ಲ ನೆಲಕ್ಕುರುಳಿಸಿದಳು. ಹಠಾತ್ತನೆ ದಾಳಿ ಮಾಡಿದ ರಾಣಿಯನ್ನು ಕಂಡ ಶಿವಾಜಿ ತಲ್ಲಣಗೊಂಡನು. ಕುದುರೆಯಿಂದ ಕೆಳಗಿಳಿದು ಕೈ ಮುಗಿದು "ದೇವಿ ನನ್ನ ಅಪರಾಧವನ್ನು ಕ್ಷಮಿಸು. ನಾನು ನಿನ್ನ ಮಗನೆಂದು ತಿಳಿ" ಎಂದು ಕೇಳಿಕೊಂಡನು. ರಾಣಿಯು ಶಿವಾಜಿಗೆ "ನನ್ನ ಪತಿಯನ್ನು ಕೊಂದು ಈಗ ಕ್ಷಮೆ ಯಾಚಿಸುತ್ತಿದ್ದೀರಾ?" ಎಂದಳು. ಅದು "ನನ್ನ ದುಷ್ಟ ಸರದಾರನ ಕೆಲಸ, ಅದರಲ್ಲಿ ನನ್ನ ತಪ್ಪಿಲ್ಲ" ಎಂದು ಪ್ರತಿಪಾದಿಸಿದನು. ಶಿವಾಜಿ. "ನಾನು ಕರ್ನಾಟಕಕ್ಕೆ ಬಂದು ದೊಡ್ಡ ತಪ್ಪು ಮಾಡಿದೆ" ಎಂದು ಒಪ್ಪಿಕೊಂಡನು. ಇಬ್ಬರೂ ರಾಜಿ ಮಾಡಿಕೊಂಡ ನಂತರದ ಹೃದಯಂಗಮ ದೃಶ್ಯವನ್ನು ಶಿಲ್ಪಿ ಯಾದವಾಡದಲ್ಲಿ ನಿರ್ಮಿಸಿದನು. ಶಿವಾಜಿ ತನ್ನ ತೊಡೆಯ ಮೇಲೆ ಮಲ್ಲಮ್ಮನ ಮಗನನ್ನು ಕೂಡಿಸಿಕೊಂಡು ಹಾಲು ಕುಡಿಸುತ್ತಿರುವ ದೃಶ್ಯ, ಪಕ್ಕದಲ್ಲಿ ನಿಂತ ರಾಣಿ ಹಿಂದೆ ಶಿವಾಜಿಯ ನಾಯಿ ಇಂದಿಗೂ ಕಾಣ ಸಿಗುತ್ತವೆ!

ಬೆಳವಡಿ ಮಲ್ಲಮ್ಮ ಶಿವಾಜಿಯನ್ನು ಸೋಲಿಸಿದರೆ, ಶಿವಮೊಗ್ಗ ಜಿಲ್ಲೆಯ. ಕೆಳದಿಯ ರಾಣಿ ಚೆನ್ನಮ್ಮ (೧೬೭೨-೧೬೯೭) ಮೊಘಲರಿಗೆ ಅಂಜಿ ತಲೆ ಮರೆಸಿಕೊಂಡು ಓಡಿ ಬಂದ ಶಿವಾಜಿಯ ಮಗ ರಾಜಾರಾಮನಿಗೆ ಆಶ್ರಯ ನೀಡಿದ ಕೆಚ್ಚೆದೆಯ ರಾಣಿ. ಔರಂಗಜೇಬ್ ತನ್ನ ಮಗ ಅಜಮತಾರನ ಜೊತೆಗೆ ಭಾರಿ ಸೈನ್ಯ ಕಳಿಸಿದನು. ಆದರೆ ಚಾಣಾಕ್ಷಳಾದ ಚೆನ್ನಮ್ಮಾಜಿ ತನ್ನ ರಾಜಧಾನಿಯನ್ನು ಭುವನಗಿರಿಗೆ ಸ್ಥಳಾಂತರಿಸಿ ಸುತ್ತಲಿನ ಬೆಟ್ಟ, ಕಣಿವೆ, ಇಕ್ಕಟ್ಟು ದಾರಿ, ಕಾಲುದಾರಿ, ಕಳ್ಳದಾರಿಗಳಲ್ಲಿ ತನ್ನ ಸೈನಿಕರನ್ನು ನಿಲ್ಲಿಸಿ ಮುಘಲ್ ಸೇನೆಗೆ ಅನ್ನ ನೀರು ಸಿಗದಂತೆ ಮಾಡಿದಳು. ದಟ್ಟವಾದ ಕಾಡುಗಳ ಸಂದುಗೊಂದುಗಳಲ್ಲಿ ಚಲಿಸಲು ಆಗದೆ ಮಲೆನಾಡಿನ ಮಳೆಗೆ ತತ್ತರಿಸಿ ಪ್ರಾಣಭೀತಿಯಿಂದ ಪಲಾಯನಗೈದರು ಮೊಗಲರು. ಕಕ್ಕಾಬಿಕ್ಕಿಯಾಗಿ ಓಡುವಾಗ ಹೇರಳವಾದ ಯುದ್ಧ ಸಾಮಗ್ರಿ ಬಿಟ್ಟುಹೋದರು. ಕರ್ನಾಟಕದ ಮಲೆನಾಡಿನ ಪುಟ್ಟ ರಾಜ್ಯದ, ಚಿಕ್ಕ ವಯಸ್ಸಿನಲ್ಲಿ ಗಂಡನ ಭೀಕರ ಕೊಲೆಯನ್ನು ಕಂಡ ರಾಣಿ, ಬಲಾಢ್ಯ ಮೊಗಲ್ ಚಕ್ರವರ್ತಿ ಔರಂಗಜೇಬನನ್ನು ಸೋಲಿಸಿದ್ದು ಇತಿಹಾಸದಲ್ಲಿಯೇ ಅಪೂರ್ವ ಮತ್ತು ಅಮೋಘ ಸಾಧನೆ!

ಕೆಳದಿಯ ಚೆನ್ನಮ್ಮ ಮೊಗಲರನ್ನು ಸೋಲಿಸಿದರೆ, ಬೆಳಗಾವಿ ಜಿಲ್ಲೆಯ ಕಿತ್ತೂರು ಚೆನ್ನಮ್ಮ ಬಲಾಢ್ಯ ಬ್ರಿಟಿಷರನ್ನು ಸೋಲಿಸಿದಳು. ಅವಳು ಸೆರೆಯಾಳುಗಳನ್ನು ಅದರಲ್ಲೂ ಮಹಿಳೆ ಮತ್ತು ಮಕ್ಕಳನ್ನು ಅಕ್ಕರೆಯಿಂದ ಕಂಡ ಕರುಣಾಮಯಿ. ಮುಂದೆ ಹಿತಶತ್ರುಗಳೊಂದಿಗೆ ಪಿತೂರಿ ನಡೆಸಿ ಮದ್ದಿನಲ್ಲಿ ಸೆಗಣಿ ಸೇರಿಸಿ ರಾಣಿ ಚೆನ್ನಮ್ಮಳ ತೋಪು ಹಾರದಂತೆ ಮೋಸಮಾಡಿ ಅವಳನ್ನು ಸೆರೆ ಹಿಡಿದು ಇಟ್ಟಾಗ, ಸ್ವಾತಂತ್ರ್ಯದ ಕನಸನ್ನೇ ಕಂಡಳು ವೀರರಾಣಿ. ಸೆರೆಮನೆಯಲ್ಲಿ ಸಂಧಿಸಲು ಬಂದ ಸಂಗೊಳ್ಳಿ ರಾಯಣ್ಣ 'ತಾಯಿ' ಎಂದು ಕರೆದಾಗ "ತಾಯಿ ಎಂದು ಕರೆದ ಕನ್ನಡದ ಕಂದ ಯಾರು?" ಎಂದು ಕೇಳಿದ ಕೆಚ್ಚಿನ ರಾಣಿ ಚೆನ್ನಮ್ಮ. "ನಿಮ್ಮ ಧಮನಿ-ಧಮನಿಗಳಲ್ಲಿ ರಕ್ತದ ಕಣಗಳಿರುವವರೆಗೂ ವೀರರಾಗಿ ಹೋರಾಡಿ" ಎಂದು ಹುರಿದುಂಬಿಸಿದ ಕಿತ್ತೂರು ಚೆನ್ನಮ್ಮ, ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಹೋರಾಟದ ಕಹಳೆ ಊದಿದ್ದು ಝಾನ್ಸಿ ಲಕ್ಷ್ಮೀಬಾಯಿಗಿಂತಲೂ ೩೩ ವರ್ಷ...ಮೊದಲು!

ಧೈರ್ಯ, ಸ್ಥೈರ್ಯ, ಸ್ವಾಭಿಮಾನ ಮತ್ತು ಸ್ವಾತಂತ್ರ್ಯದ ಸಾಕಾರ ಮೂರ್ತಿಗಳಾಗಿ ನಮ್ಮ ಕರ್ನಾಟಕದಲ್ಲಿ ವಿಜಯ ಪತಾಕೆ ಹಾರಿಸಿ ಚಿರಸ್ಮರಣೀಯರಾಗಿ ಈ ವೀರವನಿತೆಯರು ವಿಜೃಂಭಿಸಿದ್ದಾರೆ.

### ಕೃತಿಕಾರರ ಪರಿಚಯ



ವಿಜಯಲಕ್ಷ್ಮಿ ಈಶ್ವರಪ್ಪ ಬಾಳೇಕುಂದ್ರಿಯವರು ಬೆಳಗಾವಿಯಲ್ಲಿ ೧೯೪೦ ಆಗಸ್ಟ್ ೨ರಂದು ಜನಿಸಿದರು. ಇವರು ಕರ್ನಾಟಕದ ಪ್ರಪ್ರಥಮ ಮಹಿಳಾ ಹೃದ್ರೋಗ ತಜ್ಞೆ. ಇವರಿಗೆ ೨೦೦೮ರಲ್ಲಿ ಕರ್ನಾಟಕ ಸರ್ಕಾರವು ರಾಜ್ಯೋತ್ಸವ ಪ್ರಶಸ್ತಿ ನೀಡಿತು. ೨೦೧೩ರಲ್ಲಿ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ.

ಶ್ರೀಮತಿ ವಿಜಯಲಕ್ಷ್ಮಿ ಬಾಳೇಕುಂದ್ರಿಯವರು ವೈದ್ಯಕೀಯ ಕೃತಿಗಳನ್ನೂ ಅಂಕಣಗಳನ್ನೂ ಬರೆದಿದ್ದಾರೆ. 'ಸಮಾಜ ವಿಕಾಸಕ್ಕೆ ಶರಣ ಸಂಸ್ಕೃತಿ', 'ಜೀವನ್ಮುಕ್ತಿ', 'ಚೆಣ್ಣರ ಚಿತ್ತಾರ', 'ಚೆಣ್ಣರ ಚಿಲಿಪಿಲಿ' ಇವರ ಪ್ರಮುಖ ಕೃತಿಗಳಾಗಿವೆ. 'ಕರ್ನಾಟಕದ ವೀರ ಮಹಿಳೆಯರು' ಪಾಠವನ್ನು ಇವರ 'ಜೀವನಧಾರೆ'. ಕೃತಿಯಿಂದ ಆಯ್ಕೆ ಮಾಡಲಾಗಿದೆ.

## ಪದಗಳ ಅರ್ಥ

ಈಟಿ – ಶೂಲ;
ಕಕ್ಕಾಬಿಕ್ಕಿ – ದಿಗ್ಭ್ರಮೆ;
ಕರಾ(ಲ)ಳ – ಭಯಂಕರವಾದ;
ಕಹಳೆ – ಉದ್ದವಾಗಿ ಬಾಗಿರುವ ತುತ್ತೂರಿ;
ಗದ್ಗದಿತ – ದುಃಖಭರಿತ ನಡುಕದ ಧ್ವನಿ;
ಜಾನುವಾರು – ಪ್ರಾಣಿಗಳು;
ತಲ್ಲಣ – ತಳಮಳ;
ತೋಪು – ಮರಗಳ ಸಮೂಹ;
ದಾಸ್ಯ – ಊಳಿಗ, ಅಧೀನತೆ;
ಪತಾಕೆ – ಧ್ವಜ, ಬಾವುಟ;
ಪಲಾಯನ (ನಾ) – ಓಟ, ಪರಾರಿ, ತಪ್ಪಿಸಿಕೊಳ್ಳುವಿಕೆ;
ಪ್ರಾಣಭೀತಿ – ಜೀವಭಯ;
ಪ್ರಮಾಣ – ಅಳತೆ, ಪರಿಮಿತಿ, ನಿಯಮ;
ಲಂಗರು (ನಾ) – ಬಂದರಿನಲ್ಲಿ ಹಡಗನ್ನು ನಿಲ್ಲಿಸುವುದಕ್ಕಾಗಿ ಹಡಗಿನ ಪಕ್ಕದಲ್ಲಿ ಸಮುದ್ರದಾಳಕ್ಕೆ ಇಳಿಬಿಡುವ ಭಾರವಾದ ಕಬ್ಬಿಣದ ಸಲಕರಣೆ;
ವಿಜಯೋತ್ಸವ – ಗೆಲುವು ದೊರೆತಾಗ ಆಚರಿಸುವ ಸಮಾರಂಭ;
ಸಪ್ತಸಮುದ್ರ – ಏಳು ಸಮುದ್ರಗಳು;
ಸಾರ್ಥಕ – ಪ್ರಯೋಜನವುಳ್ಳ, ಸಫಲವಾದ;
ಹೃದಯಂಗಮ – ಮನಮುಟ್ಟುವಂತಹದು.



## ಅಭ್ಯಾಸ

ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

೧. ಪೋರ್ಚುಗೀಸರು ಕೇಳಿದ ಬೆಲೆಗೆ ವಸ್ತುಗಳನ್ನು ಕೊಡಲು ಅಬ್ಬಕ್ಕದೇವಿಯು ಏಕೆ ಒಪ್ಪಲಿಲ್ಲ?
೨. ಮಲ್ಲಮ್ಮಾಜಿಯು ಪರಾಕ್ರಮದಲ್ಲಿ ಈಶಪ್ರಭುವಿಗೆ ಅಪಾರ ನಂಬಿಕೆ ಇತ್ತು ಏಕೆ?
೩. ವಿಜಯೋತ್ಸವದ ಸಂಭ್ರಮದಲ್ಲಿದ್ದ ಮಲ್ಲಮ್ಮಾಜಿಗೆ ಆಘಾತವಾಯಿತು ಏಕೆ?
೪. ಪೋರ್ಚುಗೀಸರು ವ್ಯಾಪಾರಕ್ಕಾಗಿ ಭಾರತಕ್ಕೇ ಏಕೆ ಬಂದರು?
೫. ದೇಸಾಯಿ ಈಶಪ್ರಭು ಕಿಡಿಕಿಡಿಯಾದುದೇಕೆ?

ಆ) ಕೆಳಗಿನ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೧. ಜೆನೋವದ ಪ್ರವಾಸಿ ಪಿತ್ರೋ ಅಬ್ಬಕ್ಕನನ್ನು ಕುರಿತು ಏನೆಂದು ಬರೆದಿದ್ದಾನೆ?
೨. ಕಿತ್ತೂರು ಚೆನ್ನಮ್ಮನು ಸೆರೆಯಾದುದೇಕೆ?

೩. ಕೆಳದಿ ಚೆನ್ನಮ್ಮನು ತನ್ನ ರಾಜಧಾನಿಯನ್ನು ಭುವನಗಿರಿಗೆ ಏಕೆ ಸ್ಥಳಾಂತರಿಸಿದಳು?

೪. ಪೋರ್ಚುಗೀಸರು ಭಾರತೀಯರನ್ನು ಯಾವರೀತಿಯಲ್ಲಿ ಆರ್ಥಿಕವಾಗಿ ಶೋಷಣೆ ಮಾಡುತ್ತಿದ್ದರು?

ಇ) ಸಂದರ್ಭಸಹಿತ ಸ್ವಾರಸ್ಯವನ್ನು ವಿವರಿಸಿರಿ.

೧. "ಒಬ್ಬಂಟಿಗರಾದ ನಿಮ್ಮನ್ನು ನೋಡುವವರ್ಯಾರು?"

೨. "ದೇವಿ ನನ್ನ ಅಪರಾಧವನ್ನು ಕ್ಷಮಿಸು"

೩. "ಇತಿಹಾಸದಲ್ಲಿಯೇ ಅಪೂರ್ವ ಮತ್ತು ಅಮೋಘ ಸಾಧನೆ!"

೪. "ತಾಯಿ ಎಂದು ಕರೆದ ಕನ್ನಡದ ಕಂದ ಯಾರು?"

೫. "ಇದು ನಮ್ಮ ಕೊನೆಯ ಭೇಟಿ."

ಈ) ಕೆಳಗಿನ ಪ್ರಶ್ನೆಗಳಿಗೆ ಎಂಟು–ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

೧. ಶಿವಾಜಿಯು ಮಲ್ಲಮ್ಮಾಜಿಯೊಂದಿಗೆ ರಾಜಿಮಾಡಿಕೊಂಡ ಸನ್ನಿವೇಶವನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

೨. ಅಬ್ಬಕ್ಕದೇವಿಯು ಸಪ್ತ ಸಮುದ್ರದಾಚೆ ವಿಖ್ಯಾತಳಾದುದು ಹೇಗೆ? ವಿವರಿಸಿರಿ.

೩. ಕೆಳದಿ ಚೆನ್ನಮ್ಮನು ಯುದ್ಧವನ್ನು ಮಾಡದೆ ಬಲಾಢ್ಯ ಮೊಗಲರ ಸೈನ್ಯವನ್ನು ಹೇಗೆ ಸೋಲಿಸಿದಳು? ವಿವರಿಸಿರಿ.

೪. ಕಿತ್ತೂರು ರಾಣಿ ಚೆನ್ನಮ್ಮನ ಸ್ವಾಭಿಮಾನ ಮತ್ತು ದೇಶಾಭಿಮಾನವನ್ನು ಕುರಿತು ಬರೆಯಿರಿ.

## ಭಾಷಾಭ್ಯಾಸ

ಅ) ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿರಿ.

ಪ್ರಾಣಪಕ್ಷಿ, ಸಂಕೋಲೆ, ತಲ್ಲಣ, ಹೃದಯಂಗಮ, ಪತಾಕೆ, ವಿಜಯೋತ್ಸವ.

ಆ) ಕೆಳಗಿನ ಶಬ್ದಗಳಲ್ಲಿ ಅನುಕರಣಾವ್ಯಯ, ಜೋಡುನುಡಿ ಮತ್ತು ದ್ವಿರುಕ್ತಿಗಳನ್ನು ಗುರುತಿಸಿ ಪಟ್ಟಿ ಮಾಡಿ.

ಕಣಕಣ, ಧಗಧಗ, ಧಮನಿಧಮನಿ, ಕಿಡಿಕಿಡಿ, ಝುಳಝುಳ, ಮನೆಮಠ, ರೋಗರುಜಿನ.

ಇ) ಕೆಳಗಿನ ಸಾಲುಗಳಲ್ಲಿ ಖಾಲಿ ಬಿಟ್ಟಿರುವ ಸ್ಥಳಗಳನ್ನು ಸರಿಹೊಂದುವ ಸೂಕ್ತ ಹೆಸರು(ಅಂಕಿತನಾಮ)ಗಳಿಂದ ಭರ್ತಿಮಾಡಿರಿ.

೧. ಅಬ್ಬಕ್ಕದೇವಿಯ ಸೈನ್ಯದಲ್ಲಿದ್ದ ಮೀನುಗಾರ ಸಾಹಸಿ ಸೈನಿಕರು ——————

೨. ಸಂನ್ಯಾಸಿಯ ವೇಷ ಧರಿಸಿದ ಮಲ್ಲಮ್ಮಾಜಿಯ ಸರದಾರ——————

೩. ಛತ್ರಪತಿ ಶಿವಾಜಿಯನ್ನು ಸೋಲಿಸಿದ ಬೆಳವಡಿಯ ರಾಣಿ————

೪. ಅಬ್ಬಕ್ಕನ ಸೈನ್ಯಕ್ಕೆ ಹೆದರಿ ಓಡಿಹೋದ ಪೋರ್ಚುಗೀಸ್ ಸೇನಾಪತಿಗಳು ---------ಮತ್ತು---

೫. ಅಬ್ಬಕ್ಕನ ಆಸ್ಥಾನಕ್ಕೆ ಭೇಟಿ ನೀಡಿದ ಜಿನೋವದ ಪ್ರವಾಸಿ----------

೬. ಉಲ್ಲಾಳವನ್ನು ಆಕ್ರಮಿಸಲು ಸಜ್ಜಾಗಿ ಕರಾವಳಿಯಲ್ಲಿ ಲಂಗರು ಹಾಕಿದ ವಿದೇಶಿಯರು-------

೭. ಕೆಳದಿಯ ಚೆನ್ನಮ್ಮನಲ್ಲಿ ಆಶ್ರಯ ಪಡೆದ ಶಿವಾಜಿಯ ರಾಜಾರಾಮನ ಮಗ--------

೮. ಕೆಳದಿಯ ಮೇಲೆ ದಂಡೆತ್ತಿ ಬಂದ ಔರಂಗಜೇಬನ ಮಗ-------------

೯. ಕಿತ್ತೂರು ರಾಣಿ ಚೆನ್ನಮ್ಮನನ್ನು ಸೆರೆಮನೆಯಲ್ಲಿ ಭೇಟಿಯಾಗಲು ಬಂದ ವೀರ-------

೧೦. ಪೋರ್ಚುಗೀಸರನ್ನು ಸೋಲಿಸಿದ ಉಲ್ಲಾಳ ರಾಣಿ---------

**ಭಾಷಾ ಚಟುವಟಿಕೆ**



ಅ) ಸ್ವಾತಂತ್ರ್ಯ ಹೋರಾಟಗಾರರ ಹೆಸರನ್ನು ಪಟ್ಟಿ ಮಾಡಿರಿ.

ಆ) ನಿಮ್ಮ ಜಿಲ್ಲೆಯಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮಹಿಳೆಯರ ಮಾಹಿತಿಯನ್ನು ಸಂಗ್ರಹಿಸಿರಿ.

ಇ) ಹತ್ತು ಕ್ರಿಯಾಪದಗಳನ್ನು 'ಕರ್ನಾಟಕದ ವೀರವನಿತೆಯರು' ಪಾಠದಿಂದ ಆಯ್ದು ಪಟ್ಟಿ ಮಾಡಿರಿ.

## ವ್ಯಾಕರಣ

### ಕ್ರಿಯಾಪದಗಳು

ಕ್ರಿಯೆಯ ಅರ್ಥವನ್ನು ಸೂಚಿಸುವ ಪದಗಳೇ ಕ್ರಿಯಾಪದ. ಕ್ರಿಯಾ ಪದದ ಮೂಲ ರೂಪಕ್ಕೆ 'ಧಾತು' ಅಥವಾ 'ಕ್ರಿಯಾಪ್ರಕೃತಿ' ಎಂದು ಹೆಸರು. ಧಾತುಗಳಿಗೆ ಪ್ರತ್ಯಯಗಳು ಸೇರಿ ಕ್ರಿಯಾಪದಗಳಾಗುತ್ತವೆ.

ಕ್ರಿಯೆಯ ಅರ್ಥವನ್ನು ಸಂಪೂರ್ಣವಾಗಿ ಕೊಡುವ ಪದಗಳು ಕ್ರಿಯಾಪದ ಎನಿಸುತ್ತವೆ. ಭಾಷೆಯಲ್ಲಿ ಕ್ರಿಯಾಪದವು ತುಂಬಾ ಮುಖ್ಯವಾದುದು. ಅದು ಕರ್ತೃವಿನ ಕಾರ್ಯವನ್ನು ಹೇಳುತ್ತದೆ.

ಕನ್ನಡದಲ್ಲಿ ಕಾಲ ಪ್ರತ್ಯಯವನ್ನು ಹಚ್ಚಿದಾಗ ಕರ್ತೃವಿನ ಲಿಂಗ ವಚನಗಳಿಗೆ ಅನುಗುಣವಾಗಿ ಕ್ರಿಯಾಪದ ವರ್ತಿಸುತ್ತದೆ.

ಉದಾಹರಣೆ:
೧) ಹಸೀನ ಆಟವನ್ನು ಆಡುತ್ತಾಳೆ.
೨) ಜಾನ್ ಮೈದಾನಕ್ಕೆ ಹೋಗುತ್ತಾನೆ.
೩) ಬಾಲಕರು ಪ್ರವಾಸ ಹೋಗುತ್ತಾರೆ.

ಈ ಮೇಲಿನ ಎಲ್ಲಾ ವಾಕ್ಯಗಳ ಕೊನೆಯ ಪದಗಳು ಸಂಪೂರ್ಣವಾದ ಅರ್ಥವನ್ನು ಕೊಡುವ, ಕ್ರಿಯೆಯನ್ನು ತಿಳಿಸುವ ಪದಗಳಾಗಿವೆ. ಹಾಗಾಗಿ ಇವನ್ನು 'ಕ್ರಿಯಾ ಪದಗಳು' ಎನ್ನುತ್ತೇವೆ. ಕ್ರಿಯಾಪದದ ಮೂಲ ರೂಪವಾದ 'ಧಾತು', ಕ್ರಿಯಾರ್ಥ ಕೊಡುವ ಪ್ರತ್ಯಯರಹಿತ ಶಬ್ದವಾಗಿರುತ್ತದೆ.

ಕ್ರಿಯಾಪದಗಳಿಗೆ ಉದಾ: ಮಾಡುತ್ತೇನೆ, ತಿನ್ನುತ್ತಾಳೆ, ಹೋಗುವರು.

ಧಾತುಗಳು : ಮಾಡು, ತಿನ್ನು, ಹೋಗು.

(ಧಾತು ಯಾವಾಗಲೂ ದ್ವಿತೀಯ ಪುರುಷ ಏಕವಚನದಲ್ಲಿರುತ್ತದೆ)

| ಪುಲ್ಲಿಂಗ | ಸ್ತ್ರೀಲಿಂಗ | ನಪುಂಸಕಲಿಂಗ |
|---|---|---|
| ಮಾಡುತ್ತಾನೆ | ಮಾಡುತ್ತಾಳೆ | ಮಾಡುತ್ತದೆ |
| ಮಾಡಿದನು | ಮಾಡಿದಳು | ಮಾಡಿತು |
| ಮಾಡುವನು | ಮಾಡುವಳು | ಮಾಡುವುದು |

ಮೂರು ಲಿಂಗಗಳಲ್ಲಿ ಉದಾಹರಣೆಯನ್ನು ಕೊಟ್ಟಿರುವ ಈ ಎಲ್ಲಾ ಪದಗಳು ಕ್ರಿಯಾಪದಗಳಾಗಿವೆ. ಈ ಎಲ್ಲಾ ಕ್ರಿಯಾಪದಗಳಿಗೂ 'ಮಾಡು' ಎಂಬ ಶಬ್ದ ಕ್ರಿಯೆಯ ಅರ್ಥವನ್ನು ಕೊಡುವ ಮೂಲ ಪದವಾಗಿದೆ. ಇದನ್ನು 'ಧಾತು' ಎನ್ನುತ್ತೇವೆ.

## ಕಾಲ ಮತ್ತು ಕ್ರಿಯಾಪದದ ರೂಪಗಳು

'ಕಾಲ' ಎಂಬ ಪದಕ್ಕೆ ಎರಡು ಘಟನೆಗಳ ನಡುವಣ ಅವಧಿಯೆಂಬ ಅರ್ಥವಿದೆ. ಇದು ಅನಾದಿ, ಅನಂತ. ಇದನ್ನು ಲೆಕ್ಕಾಚಾರದ ಅನುಕೂಲಕ್ಕಾಗಿ ಹಿಂದೆ (ನಡೆದದ್ದು) ಇಂದು (ನಡೆಯುತ್ತಿರುವುದು) ಮುಂದೆ (ಮುಂದೆ ನಡೆಯಲಿರುವುದು) ಎಂದು ಕಾಲ್ಪನಿಕ ವಿಭಾಗ ಮಾಡಿದ್ದಾರೆ. ಆದರೆ ಕಾಲವು ಅಖಂಡದ್ರವ್ಯ (Continuum). ಈ ಕಾಲವಾಹಿನಿಯನ್ನು 'ವರ್ತಮಾನವು' ಎರಡು ಖಂಡಗಳಾಗಿ ವಿಭಜಿಸುತ್ತದೆ. ಭೂತಕಾಲಕ್ಕೂ ಭವಿಷ್ಯತ್ ಕಾಲಕ್ಕೂ ನಡುವಣ ವಿಭಾಜಕವು ತುಂಬ ತೆಳು. ಗಡಿಯಾರದಲ್ಲಿ ಪ್ರತಿ ಸೆಕೆಂಡೂ ನಮ್ಮ ಆಯುಷ್ಯವನ್ನು ಭೂತಕಾಲಕ್ಕೆ ಸೇರಿಸುತ್ತ ಹೋಗುತ್ತದೆ. ನಮ್ಮ ಜೀವನ ಕ್ರಿಯೆಯು ಈ ಮೂರು ಕಾಲಗಳಿಂದ ನಿಬದ್ಧವಾಗಿದೆ. ನಮ್ಮ ಕ್ರಿಯೆಯನ್ನು ಸೂಚಿಸುವ ಪದಗಳಿಗೆ 'ಕ್ರಿಯಾಪದ'ಗಳೆಂದು ಹೇಳುತ್ತಾರೆ. ಕರ್ತೃವಿನ ಕ್ರಿಯೆ ನಡೆಯುವ ಕಾಲವನ್ನು ಸೂಚಿಸುವ ವ್ಯವಸ್ಥೆ ಭಾಷೆಯಲ್ಲಿದೆ. ಕ್ರಿಯೆಯ ಕಾಲವನ್ನು ಕಾಲಸೂಚಕ ಪ್ರತ್ಯಯಗಳು ನಿರ್ದೇಶಿಸುತ್ತವೆ. ಭೂತಕಾಲ, ವರ್ತಮಾನಕಾಲ, ಭವಿಷ್ಯತ್ ಕಾಲಗಳು ಕ್ರಮವಾಗಿ ನಡೆದ, ನಡೆಯುತ್ತಿರುವ ಮತ್ತು ನಡೆಯಬಹುದಾದ ಘಟನೆಗಳನ್ನು ಸೂಚಿಸುತ್ತವೆ. ಕನ್ನಡದಲ್ಲಿ ಭೂತಕಾಲವನ್ನು ಸೂಚಿಸಲು 'ದ' ಪ್ರತ್ಯಯವನ್ನು ವರ್ತಮಾನ ಕಾಲವನ್ನು ಸೂಚಿಸಲು 'ಉತ್ತ' ಪ್ರತ್ಯಯವನ್ನು ಹಾಗೂ ಭವಿಷ್ಯತ್ ಕಾಲವನ್ನು ಸೂಚಿಸಲು 'ವ' ಪ್ರತ್ಯಯವನ್ನು ಬಳಸಲಾಗುತ್ತದೆ.

ಕ್ರಿಯಾ ರೂಪಗಳಲ್ಲಿ ಮುಖ್ಯವಾಗಿ ಎರಡು ವಿಧಗಳಿವೆ:

೧) ಕಾಲರೂಪಗಳು

೨) ಅರ್ಥರೂಪಗಳು

ಉದಾ :

೧. ಜೋಸೆಫ್ ಊಟ ಮಾಡಿದನು (ಭೂತಕಾಲ).

೨. ಸಲೀಂ ಊಟ ಮಾಡುತ್ತಾನೆ (ವರ್ತಮಾನ).

೩. ಹುಡುಗನು ಊಟ ಮಾಡುವನು (ಭವಿಷ್ಯತ್ ಕಾಲ).

ಕನ್ನಡ ಕ್ರಿಯಾಪದಗಳಲ್ಲಿ ಕಾಲರೂಪಗಳು ಬಳಕೆಯಲ್ಲಿವೆ. ಕ್ರಿಯೆಗಳಿಗನುಗುಣವಾಗಿ ಕ್ರಿಯಾಪದದ ರೂಪವು ಬದಲಾವಣೆಯಾಗುತ್ತದೆ. ಅವುಗಳನ್ನು ಮೂರು ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ

೧). ಭೂತಕಾಲ ರೂಪ ೨) ವರ್ತಮಾನಕಾಲ ರೂಪ ೩) ಭವಿಷ್ಯತ್‌ಕಾಲ ರೂಪ

೧) **ಭೂತಕಾಲ ರೂಪ** – ನಡೆದು ಹೋದ ಕಾಲವನ್ನು ತಿಳಿಸುವ ಕ್ರಿಯಾಪದ ರೂಪಕ್ಕೆ ಭೂತಕಾಲ ರೂಪ ಎನ್ನುತ್ತಾರೆ. ಭೂತಕಾಲದ ಸೂಚಕ ಪ್ರತ್ಯಯ 'ದ' ಆಗಿರುತ್ತದೆ.

ಉದಾ: ರಾಮನು ಕಾಡಿಗೆ ಹೋದನು = (ಹೋಗು + ದ + ಅನು)

೨) **ವರ್ತಮಾನಕಾಲ ರೂಪ** – ಪ್ರಸ್ತುತ ನಡೆಯುವ ಕಾಲಕ್ಕೆ ವರ್ತಮಾನ ಕಾಲ ಎನ್ನುತ್ತಾರೆ. ವರ್ತಮಾನ ಕಾಲಸೂಚಕ ಪ್ರತ್ಯಯ 'ಉತ್ತ' ಆಗಿರುತ್ತದೆ.

ಉದಾ: ಬಡಗಿಯು ಕಾಡಿಗೆ ಹೋಗುತ್ತಾನೆ = (ಹೋಗು + ಉತ್ತ + ಆನೆ)

೩) **ಭವಿಷ್ಯತ್‌ಕಾಲ ರೂಪ** – ಮುಂದೆ ನಡೆಯುವ ಕ್ರಿಯೆಯ ಕಾಲಸೂಚಕ ಕ್ರಿಯಾರೂಪಕ್ಕೆ ಭವಿಷ್ಯತ್‌ಕಾಲ ರೂಪ ಎನ್ನುತ್ತಾರೆ. ಭವಿಷ್ಯತ್‌ಕಾಲ ಸೂಚಕ ಪ್ರತ್ಯಯ 'ವ', 'ಉವ' ಆಗಿರುತ್ತದೆ.

ಉದಾ: ನಮ್ಮ ತಂದೆ ನಾಳೆ ಬರುವರು = (ಬರು + ಉವ + ಅರು)

## ಸಮಾಸ

ಎರಡು ಅಥವಾ ಎರಡಕ್ಕಿಂತ ಹೆಚ್ಚು ಪದಗಳು ಅರ್ಥಕ್ಕೆ ಲೋಪ ಬಾರದ ರೀತಿಯಲ್ಲಿ ತಮ್ಮ ನಡುವಿನ ವಿಭಕ್ತಿ ಪ್ರತ್ಯಯ ಅಥವಾ ವಿಪರಣೆಯನ್ನು ಕಳೆದುಕೊಂಡು ಒಂದಾಗುವ ಕ್ರಿಯೆಯನ್ನು ಸಮಾಸ ಎನ್ನುವರು. ಒಟ್ಟು ಸೇರಿ ಆದ ಹೊಸ ಪದವನ್ನೇ 'ಸಮಾಸ ಪದ' ಅಥವಾ 'ಸಮಸ್ತಪದ' ಎನ್ನುವರು.

ಉದಾ: ಕಾಲಿಗೆ + ಬಳೆ = ಕಾಲ್ಬಳೆ

ಹಣೆಯಲ್ಲಿ + ಕಣ್ಣು ಉಳ್ಳವನು = ಹಣೆಗಣ್ಣ.

ಸಮಾಸ ರಚನೆಯಲ್ಲಿ ಬರುವ ಮೊದಲನೆಯ ಪದವನ್ನು 'ಪೂರ್ವಪದ'ವೆಂದು, ಎರಡನೆಯ ಪದವನ್ನು 'ಉತ್ತರಪದ'ವೆಂದು ಸಮಾಸ ಪದವನ್ನು ಬಿಡಿಸಿ ಬರೆಯುವುದನ್ನು 'ವಿಗ್ರಹ ವಾಕ್ಯ'ವೆಂದು ಕರೆಯುವರು. ಸಮಾಸದಲ್ಲಿ ಪೂರ್ವ ಮತ್ತು ಉತ್ತರ ಪದಗಳೆರಡು ಸಂಸ್ಕೃತ ಪದಗಳಾಗಿರಬೇಕು ಅಥವಾ ಎರಡೂ ಕನ್ನಡ ಪದಗಳಾಗಿರಬೇಕು. ಒಂದು ಕನ್ನಡ ಇನ್ನೊಂದು ಸಂಸ್ಕೃತ ಪದವಾದಾಗ ಅದು 'ಅರಿಸಮಾಸ'ವೆನಿಸುತ್ತದೆ. ಇದಕ್ಕೆ ಅಪವಾದ ಎಂದರೆ ಬಿರುದುಗಳಿಗೆ, ಪೂರ್ವ ಕವಿ ಪ್ರಯೋಗಗಳಿಗೆ ಇದು ಅನ್ವಯಿಸುವುದಿಲ್ಲ.

ಸಮಾಸದಲ್ಲಿ ಒಟ್ಟು ಎಂಟು ವಿಧಗಳಿವೆ.

(೧) ತತ್ಪುರುಷ (೨) ಕರ್ಮಧಾರಯ (೩) ದ್ವಿಗು (೪) ಅಂಶಿ

(೫) ದ್ವಂದ್ವ (೬) ಕ್ರಿಯಾ (೭) ಬಹುವ್ರೀಹಿ (೮) ಗಮಕ

೧. ತತ್ಪುರುಷ ಸಮಾಸ:

ಕೆಳಗಿನ ಸಮಾಸ ರಚನಾ ವಿನ್ಯಾಸಗಳನ್ನು ಗಮನಿಸಿ:

| ಪೂರ್ವಪದ | + ಉತ್ತರ ಪದ | = ಸಮಸ್ತ ಪದ/ಸಮಾಸ ಪದ |
|---|---|---|
| ೧) ತೇರಿಗೆ | + ಮರ | = ತೇರುಮರ |
| ೨) ಅರಸನ | + ಮನೆ | = ಅರಮನೆ |
| ೩) ತಲೆಯಲ್ಲಿ | + ನೋವು | = ತಲೆನೋವು |

ಇಲ್ಲಿ ಪೂರ್ವ ಮತ್ತು ಉತ್ತರಪದಗಳು ನಾಮಪದಗಳಾಗಿವೆ. ಅವೆರಡರಲ್ಲಿ ಉತ್ತರ ಪದದ ಅರ್ಥ ಪ್ರಧಾನವಾಗಿದೆ. ವಿಭಕ್ತಿ ಪ್ರತ್ಯಯಗಳು ಸಹಜವಾಗಿ ಲೋಪವಾಗಿವೆ. ಇಂತಹ ಉತ್ತರಪದ ಪ್ರಧಾನ ಸಮಸ್ತ ಪದರಚನಗಳೇ ತತ್ಪುರುಷ ಸಮಾಸ.

೨. ಕರ್ಮಧಾರಯ ಸಮಾಸ:

ಕೆಳಗಿನ ಸಮಾಸ ರಚನಾ ವಿನ್ಯಾಸಗಳನ್ನು ಗಮನಿಸಿ.

| ಪೂರ್ವಪದ | + | ಉತ್ತರಪದ | = | ಸಮಸ್ತಪದ |
|---|---|---|---|---|
| ಹಳೆಯದು | + | ಕನ್ನಡ | = | ಹಳೆಗನ್ನಡ |
| ಇನಿದು | + | ಸರ | = | ಇಂಚರ |
| ಬಿಳಿದಾದ | + | ತಿಂಗಳು | = | ಬೆಳದಿಂಗಳು |
| ಹಿರಿದು | + | ಬಾಗಿಲು | = | ಹೆಬ್ಬಾಗಿಲು |

ಇಲ್ಲಿ ಸಮಾಸ ರಚನೆಯಲ್ಲಿ ಪೂರ್ವಪದ ಗುಣವಾಚಕವಾಗಿಯೂ ಉತ್ತರಪದ ನಾಮಪದವಾಗಿಯೂ ಇವೆ. ಈ ಎರಡು ಪದ ರಚನೆಗಳ ನಡುವೆ ವಿಶೇಷಣ ಮತ್ತು ವಿಶೇಷ್ಯ ಸಂಬಂಧವಿದ್ದು ಅದರಿಂದ ಉಂಟಾಗುವ ಸಮಾಸವೇ ಕರ್ಮಧಾರಯ ಸಮಾಸ.

೩. ದ್ವಿಗು ಸಮಾಸ:

ಕೆಳಗಿನ ಸಮಾಸ ರಚನಾ ವಿನ್ಯಾಸಗಳನ್ನು ಗಮನಿಸಿ:

| | | |
|---|---|---|
| ಒಂದು | + | ಕಟ್ಟು = ಒಗ್ಗಟ್ಟು |
| ಎರಡು | + | ಭಾಗ = ಇಬ್ಭಾಗ |
| ಮೂರು | + | ಮಡಿ = ಮುಮ್ಮಡಿ |
| ಮೂರು | + | ಕಣ್ಣು = ಮುಕ್ಕಣ್ಣು |

ಸಮಾಸ ರಚನೆಯಲ್ಲಿ ಪೂರ್ವಪದ ಸಂಖ್ಯಾ ವಾಚಕವಾಗಿದ್ದು ಉತ್ತರ ಪದ ನಾಮವಾಚಕವಾಗಿದ್ದು ಅವೆರಡೂ ಸೇರಿ ಆಗುವ ಸಮಾಸವೇ ದ್ವಿಗು ಸಮಾಸ.

೪. ಅಂಶೀ ಸಮಾಸ :

ಕೆಳಗಿನ ಸಮಾಸ ರಚನಾ ವಿನ್ಯಾಸಗಳನ್ನು ಗಮನಿಸಿ:

| ಪೂರ್ವಪದ | + | ಉತ್ತರಪದ | = | ಸಮಾಸಪದ (ಸಮಸ್ತಪದ) |
|---|---|---|---|---|
| ಕೈಯ | + | ಅಡಿ | = | ಅಂಗೈ |
| ಕೈಯ | + | ಮುಂದು | = | ಮುಂಗೈ |
| ತಲೆಯ | + | ಹಿಂದು | = | ಹಿಂದಲೆ |

ಸಮಾಸ ರಚನೆಯಲ್ಲಿ ಪೂರ್ವಪದ ಅನೇಕ ಭಾಗಗಳನ್ನು ಹೊಂದಿರುವುದು ಅಂದರೆ ಅನೇಕ ಅಂಶಗಳನ್ನು ಒಳಗೊಂಡಿರುತ್ತದೆ. ಉತ್ತರಪದ ಕೇವಲ ಆ ಅಂಶಿಯ ಒಂದಂಶವನ್ನು ಮಾತ್ರ ಸೂಚಿಸುತ್ತದೆ. ಪೂರ್ವೋತ್ತರ ಪದಗಳು ಅಂಶ, ಅಂಶೀ ಸಂಬಂಧದಿಂದ ಕೂಡಿದ್ದು ಪೂರ್ವಪದದ ಅರ್ಥ ಪ್ರಧಾನವಾಗಿರುವ ಸಮಾಸವೇ ಅಂಶೀ ಸಮಾಸ.

೫. ದ್ವಂದ್ವ ಸಮಾಸ :

ಕೆಳಗಿನ ಸಮಾಸ ರಚನಾ ವಿನ್ಯಾಸಗಳನ್ನು ಗಮನಿಸಿ:

ಸಮಸ್ತ ಪದದ ವಿಗ್ರಹ ರೂಪ ಸಮಸ್ತ ಪದ

ಕಸವೂ, ಕಡ್ಡಿಯೂ = ಕಸಕಡ್ಡಿ/ಕಸಕಡ್ಡಿಗಳು

ಕೆರೆಯೂ, ಕಟ್ಟೆಯೂ, ಬಾವಿಯೂ = ಕೆರೆಕಟ್ಟೆಬಾವಿಗಳು

ಸಮಾಸ ರಚನೆಯಲ್ಲಿ ಎರಡು ಅಥವಾ ಹಲವು ನಾಮಪದಗಳು ಸಹಯೋಗ ತೋರುವಂತೆ ಸೇರಿ ಎಲ್ಲ ಪದಗಳ ಅರ್ಥವೂ ಪ್ರಧಾನವಾಗುಳ್ಳ ಸಮಾಸ ರಚನೆಯೇ ದ್ವಂದ್ವ ಸಮಾಸ.

೬. ಕ್ರಿಯಾ ಸಮಾಸ :

ಕೆಳಗಿನ ಸಮಾಸ ರಚನಾ ವಿನ್ಯಾಸಗಳನ್ನು ಗಮನಿಸಿ:

| ಪೂರ್ವಪದ | + | ಉತ್ತರಪದ | = | ಸಮಸ್ತಪದ |
|---|---|---|---|---|
| ಕೈಯನ್ನು | + | ಮುಗಿ | = | ಕೈಮುಗಿ |
| ಮೈಯನ್ನು | + | ತಡವಿ | = | ಮೈದಡವಿ |
| ತಲೆಯನ್ನು | + | ಕೊಡವು | = | ತಲೆಗೊಡವು |

ಸಮಾಸರಚನೆಯಲ್ಲಿ ಪೂರ್ವಪದ ನಾಮಪದವಾಗಿದ್ದು (ಸಾಮಾನ್ಯವಾಗಿ 'ಅನ್ನು' ದ್ವಿತೀಯಾ ವಿಭಕ್ತಿ ಅಂತ್ಯವಾಗಿದ್ದು) ಉತ್ತರಪದ ಕ್ರಿಯಾಪದವಾಗಿದ್ದು ಅವೆರಡೂ ಸೇರಿ ಆಗುವ ಸಮಾಸವೇ ಕ್ರಿಯಾಸಮಾಸ.

**೭. ಬಹುವ್ರೀಹಿ ಸಮಾಸ :**

ಕೆಳಗಿನ ಸಮಾಸ ರಚನಾ ವಿನ್ಯಾಸಗಳನ್ನು ಗಮನಿಸಿ:

| ಸಮಸ್ತ ಪದದ ವಿಗ್ರಹ ರೂಪ | | ಸಮಸ್ತ ಪದ |
|---|---|---|
| ಹಣೆಯಲ್ಲಿ ಕಣ್ಣುಳ್ಳವನು | = | ಹಣೆಗಣ್ಣ (ಶಿವ) |
| ಮೂರು ಕಣ್ಣುಳ್ಳವನು | = | ಮುಕ್ಕಣ್ಣ (ಶಿವ) |
| ಒಂದು ಕಣ್ಣುಳ್ಳವನು | = | ಒಕ್ಕಣ್ಣ |

ಸಮಾಸ ರಚನೆಯಲ್ಲಿ ಎರಡು ಅಥವಾ ಅನೇಕ ನಾಮಪದಗಳು ಸೇರಿ ಸಮಾಸವಾದಾಗ ಬೇರೊಂದು ಪದದ (ಅನ್ಯ ಪದದ) ಅರ್ಥ ಪ್ರಧಾನವಾಗುವ ಸಮಾಸವೇ ಬಹುವ್ರೀಹಿ ಸಮಾಸ.

**೮. ಗಮಕ ಸಮಾಸ :**

ಕೆಳಗಿನ ಸಮಾಸ ರಚನಾ ವಿನ್ಯಾಸಗಳನ್ನು ಗಮನಿಸಿ.

| ಪೂರ್ವಪದ | + | ಉತ್ತರಪದ | = | ಸಮಸ್ತಪದ |
|---|---|---|---|---|
| ಇವಳು | + | ಹುಡುಗಿ | = | ಈಹುಡುಗಿ |
| ಮಾಡಿದ್ದು | + | ಅಡುಗೆ | = | ಮಾಡಿದಡಿಗೆ |
| ಅರಳುವುದು | + | ಮಲ್ಲಿಗೆ | = | ಅರಳುಮಲ್ಲಿಗೆ |

ಪೂರ್ವ ಪದದಲ್ಲಿ ಸರ್ವನಾಮ ಅಥವಾ ಕೃದಂತಗಳಿದ್ದು ಉತ್ತರಪದ ನಾಮಪದದೊಂದಿಗೆ ಸೇರಿದಾಗ ಆಗುವ ಸಮಾಸವೇ ಗಮಕ ಸಮಾಸ.

**ನೀ ಶಾಶ್ವತವಲ್ಲ – ನೀ ಮಾಡಿದ ಸೇವೆ ಶಾಶ್ವತ**

*****

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 37 ಎನ್‌ಎಲ್‌ಎ 20

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 09-06-20

ಇಂದ:

ಸರ್ಕಾರದ ಕಾರ್ಯದರ್ಶಿಗಳು,
ಜಲ ಸಂಪನ್ಮೂಲ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ / ~~ಪರಿಷತ್ತು~~,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. [illegible] ಬಿ ಸುರೇಶ್ ಗೌಡ ರವರ ಚುಕ್ಕೆ ~~ಗುರುತಿನ~~ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2188+2189 ಕ್ಕೆ ಉತ್ತರಗಳನ್ನು ಸಲ್ಲಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. [illegible] ಬಿ ಸುರೇಶ್ ಗೌಡ. ರವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2188+2189 ಕ್ಕೆ ಜಲಸಂಪನ್ಮೂಲ ಇಲಾಖೆಯು ನೀಡಿರುವ ಉತ್ತರದ 10 ಪ್ರತಿಗಳನ್ನು ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,
Vejul
ಶಾಖಾಧಿಕಾರಿ
ಜಲಸಂಪನ್ಮೂಲ ಇಲಾಖೆ (ಎಂಎಂಐ-2)

Recd
09/06/2020

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು.
2. ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ
4. [illegible]

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2188 + 2189
2. ಸದಸ್ಯರ ಹೆಸರು : ಶ್ರೀ ಲಿಂಗೇಶ ಕೆ.ಎಸ್., ಶ್ರೀ ಸುರೇಶ್‌ಗೌಡ
3. ಉತ್ತರಿಸಬೇಕಾದ ದಿನಾಂಕ : 17-03-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಪ್ರಸ್ತುತ ಸರ್ಕಾರ ಅಧಿಕಾರಕ್ಕೆ ಬಂದ ನಂತರ ಇಲ್ಲಿಯವರೆಗೆ ಜಲಸಂಪನ್ಮೂಲ ಇಲಾಖೆಯ ವ್ಯಾಪ್ತಿಯ ಕಾವೇರಿ ನೀರಾವರಿ ನಿಗಮ ನಿಯಮಿತದ ವ್ಯಾಪ್ತಿಯಲ್ಲಿ 2018-19 ಹಾಗೂ 2019-20 ನೇ ಸಾಲಿನಲ್ಲಿ ತಡೆಹಿಡಿಯಲಾಗಿರುವ ಕಾಮಗಾರಿಗಳ ಹಾಗೂ ಹೊಸದಾಗಿ ತೆಗೆದುಕೊಂಡಿರುವ ಕಾಮಗಾರಿಗಳು ಯಾವುವು ; (ಸಂಪೂರ್ಣ ಮಾಹಿತಿ ನೀಡುವುದು) | 2018-19 ಹಾಗೂ 2019-20 ನೇ ಸಾಲಿನಲ್ಲಿ ಪ್ರಸ್ತಾವಿಸಲಾಗಿ ದಿನಾಂಕ:20-09-2019 ರಂದು ನಡೆದ ನಿಗಮ ಮಂಡಳಿಯ ನಿರ್ಣಯದಂತೆ ಕೈಬಿಡಲಾಗಿರುವ ಕಾಮಗಾರಿಗಳ ವಿವರಗಳನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ.<br><br>2019-20ನೇ ಸಾಲಿನಲ್ಲಿ ಹೊಸದಾಗಿ 198 ಸಂಖ್ಯೆಯ ರೂ.131.74 ಕೋಟಿ ಮೊತ್ತದ ಕಾಮಗಾರಿಗಳಿಗೆ ಅನುಮೋದನೆಯಾಗಿದ್ದು, ಕಾಮಗಾರಿಗಳ ವಿವರಗಳನ್ನು **ಅನುಬಂಧ-2** ರಲ್ಲಿ ಲಗತ್ತಿಸಿದೆ. |
| ಆ | 2019 ರ ಜುಲೈನಿಂದ ಇಲ್ಲಿಯವರೆಗೆ ಜಲಸಂಪನ್ಮೂಲ ಇಲಾಖೆಯ ವ್ಯಾಪ್ತಿಯ ಕಾವೇರಿ ನೀರಾವರಿ ನಿಗಮ ನಿಯಮಿತದಿಂದ ಹೊಸದಾಗಿ ತೆಗೆದುಕೊಂಡಿರುವ ಕಾಮಗಾರಿಗಳಿಗೆ ಅನುದಾನ ನಿಗದಿಪಡಿಸಲಾಗಿದೆಯೇ ; (ನಿಗದಿಪಡಿಸಿದ್ದಲ್ಲಿ ವಲಯವಾರು, ವಿಭಾಗವಾರು ಸಂಪೂರ್ಣ ಮಾಹಿತಿ ನೀಡುವುದು) | 2019-20 ನೇ ಸಾಲಿಗೆ ಬಂಡವಾಳ ಲೆಕ್ಕ ಶೀರ್ಷಿಕೆಯಡಿ ಕಾಮಗಾರಿಗಳಿಗೆ ರೂ.2028.87 ಕೋಟಿ ಅನುದಾನವನ್ನು ನಿಗದಿಪಡಿಸಲಾಗಿದ್ದು, ವಲಯವಾರು, ವಿಭಾಗವಾರು ಮಾಹಿತಿಯನ್ನು **ಅನುಬಂಧ-3** ರಲ್ಲಿ ಲಗತ್ತಿಸಿದೆ. |
| ಇ | ಸದರಿ ಅವಧಿಯಲ್ಲಿ ಜಲಸಂಪನ್ಮೂಲ ಇಲಾಖೆಯ ವ್ಯಾಪ್ತಿಯ ಕಾವೇರಿ ನೀರಾವರಿ ನಿಗಮ ನಿಯಮಿತದಿಂದ ಈ ರೀತಿ ಹೊಸ ಕಾಮಗಾರಿಗಳಿಗೆ ಅನುದಾನ ನೀಡಿದ್ದಲ್ಲಿ ಹಿಂದಿನ ಸರ್ಕಾರ 2018-19 ಹಾಗೂ 2019-20 ನೇ ಸಾಲಿನಲ್ಲಿ ಮಂಜೂರಾದ ಕಾಮಗಾರಿಗಳಿಗೆ ಟೆಂಡರ್ ಕರೆದು ತಾಂತ್ರಿಕ ಬಿಡ್ ಅನುಮೋದನೆ ಮಾಡಿ ಹಾಗೂ ಆರ್ಥಿಕ ಬಿಡ್ ಅನುಮೋದನೆ ಮಾಡಿ ತಡೆಹಿಡಿದಿರುವ ಕಾಮಗಾರಿಗಳ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು ? (ವಲಯವಾರು, ವಿಭಾಗವಾರು ಸಂಪೂರ್ಣ ಮಾಹಿತಿ ನೀಡುವುದು) | 2018-19ನೇ ಸಾಲಿನ ಕಾರ್ಯಕ್ರಮ ಪಟ್ಟಿಯಲ್ಲಿ ಅನುಮೋದನೆಗೊಂಡು 2019-20 ನೇ ಸಾಲಿಗೆ ಮುಂದುವರೆದ ಕಾಮಗಾರಿಗಳಿಗೆ ಅವಶ್ಯಕ ಅನುದಾನ ಲಭ್ಯವಿಲ್ಲದ ಕಾರಣ, ಆಡಳಿತಾತ್ಮಕ ಹಿತದೃಷ್ಟಿಯಿಂದ ಹಾಗೂ ಆರ್ಥಿಕ ಮಿತವ್ಯಯತೆಯನ್ನು ಕಾಯ್ದುಕೊಳ್ಳುವ ಹಿತದೃಷ್ಟಿಯಿಂದ ರೂ.6808.60 ಕೋಟಿ ಮೊತ್ತದ ಇನ್ನು ಅನುಷ್ಠಾನಗೊಳ್ಳದೆ ವಿವಿಧ ಹಂತದ ಪ್ರಕ್ರಿಯೆಯಲ್ಲಿರುವ ಹೊಸ ಕಾಮಗಾರಿಗಳನ್ನು ದಿನಾಂಕ:20-09-2019 ರಂದು ನಡೆದ ಕಾವೇರಿ ನೀರಾವರಿ ನಿಗಮದ ಮಂಡಳಿಯ 70ನೇ ಸಭೆಯ ನಿರ್ಣಯದಂತೆ ಕೈಬಿಡಲಾಗಿದೆ. ಅನುದಾನದ ಲಭ್ಯತೆಯ ಅನುಸಾರವಾಗಿ ಕಾಮಗಾರಿಗಳನ್ನು ತೆಗೆದುಕೊಳ್ಳಲು ಕ್ರಮವಹಿಸಲಾಗುವುದು. |

*ಸಂಖ್ಯೆ:ಜಸಂಇ 37 ಎನ್‌ಎಲ್‌ಎ 2020*

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಲಿಂಗೇಶ್ ಕೆ.ಎಸ್. ಮತ್ತು ಶ್ರೀ ಸುರೇಶ್ ಗೌಡ ಇವರ ಪ್ರಶ್ನೆ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2188+2189 ಕ್ಕೆ ಅನುಬಂಧ-1

**2019-20 ನೇ ಸಾಲಿನಲ್ಲಿ ದಿನಾಂಕ :20.09.2019 ರಂದು ನಡೆದ ನಿಗಮ ಮಂಡಳಿಯ ನಿರ್ಣಯದಂತೆ ಕೈಬಿಡಲಾಗಿರುವ ಕಾಮಗಾರಿಗಳ ವಿವರ.**

| ಕ್ರ ಸಂ | ವಿಧಾನ ಸಭಾ ಕ್ಷೇತ್ರದ ಹೆಸರು | ಲೆಕ್ಕ ಶೀರ್ಷಿಕೆ | ಒಟ್ಟು ಕಾಮಗಾರಿಗಳ ಸಂಖ್ಯೆ | ಒಟ್ಟು ಮೊತ್ತ (ರೂ. ಕೋಟಿಗಳಲ್ಲಿ) |
|---|---|---|---|---|
| 1 | ಚಾಮುಂಡೇಶ್ವರಿ | 4701 Capital and other Capital Head | 10 | 48.66 |
| 2 | ವರುಣಾ | | 75 | 295.70 |
| 3 | ಹುಣಸೂರು | | 51 | 204.71 |
| 4 | ಹೆಚ್.ಡಿ.ಕೋಟೆ | | 52 | 80.09 |
| 5 | ಪಿರಿಯಪಟ್ಟಣ | | 173 | 79.86 |
| 6 | ನಂಜನಗೂಡು | | 7 | 163.35 |
| 7 | ಟಿ.ನರಸೀಪುರ | | 258 | 232.65 |
| 8 | ಕೆ.ಆರ್.ನಗರ | | 81 | 219.58 |
| 9 | ಕೊಳ್ಳೇಗಾಲ | | 46 | 5.37 |
| 10 | ಚಾಮರಾಜನಗರ | | 4 | 3.66 |
| 11 | ಹನೂರು | | 44 | 48.96 |
| 12 | ಗುಂಡ್ಲುಪೇಟೆ | | 1 | 60.00 |
| 13 | ಅರಕಲಗೂಡು | | 8 | 15.07 |
| 14 | ಮಡಿಕೇರಿ | | 118 | 217.81 |
| 15 | ಮಾಗಡಿ | | 29 | 189.22 |
| 16 | ರಾಮನಗರ | | 20 | 145.30 |
| 17 | ಕನಕಪುರ | | 168 | 417.00 |
| 18 | ಚನ್ನಪಟ್ಟಣ | | 70 | 129.00 |
| 19 | ಶ್ರೀರಂಗಪಟ್ಟಣ | | 530 | 677.05 |
| 20 | ಮಂಡ್ಯ | | 461 | 475.09 |
| 21 | ಮದ್ದೂರು | | 267 | 421.68 |
| 22 | ನಾಗಮಂಗಲ | | 452 | 497.20 |
| 23 | ಮಳವಳ್ಳಿ | | 75 | 412.35 |
| 24 | ಮೇಲುಕೋಟೆ | | 178 | 102.98 |
| 25 | ಅರಕಲಗೂಡು | | 695 | 309.43 |
| 26 | ಹೊಳನರಸೀಪುರ | 4701 Capital and other Capital Head | 697 | 409.58 |
| 27 | ಹಾಸನ | | 82 | 59.37 |
| 28 | ಆಲೂರು-ಸಕಲೇಶಪುರ | | 213 | 139.74 |
| 29 | ಕೆ.ಆರ್.ಪೇಟೆ | | 139 | 171.06 |
| 30 | ಬೇಲೂರು | | 135 | 82.83 |
| 31 | ಮೇಲುಕೋಟೆ | | 21 | 16.86 |
| 32 | ಶ್ರವಣಬೆಳಗೊಳ | | 135 | 80.48 |
| 33 | ಚನ್ನರಾಯಪಟ್ಟಣ | | 1 | 0.15 |
| 34 | ತಿಪಟೂರು | | 1 | 0.05 |
| 35 | ತುರುವೇಕೆರೆ | | 24 | 16.41 |
| 36 | ಕುಣಿಗಲ್ | | 35 | 652.50 |
| | ಒಟ್ಟು :- | | **5356** | **6808.60** |

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಲಿಂಗೇಶ್ ಕೆ.ಎಸ್. ಮತ್ತು ಶ್ರೀ ಸುರೇಶ್ ಗೌಡ ಇವರ ಪ್ರಶ್ನೆ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2188+2189 ಕ್ಕೆ ಅನುಬಂಧ-2

**2019-20ನೇ ಸಾಲಿನಲ್ಲಿ ಹೊಸದಾಗಿ ಅನುಮೋದನೆಯಾದ ಕಾಮಗಾರಿಗಳ ವಿವರ.**

| ಕ್ರ.ಸಂ | ವಿಧಾನಸಭಾ ಕ್ಷೇತ್ರ | ಕಾಮಗಾರಿಗಳ ಸಂಖ್ಯೆ | ಮೊತ್ತ (ರೂ.ಕೋಟಿ ಗಳಲ್ಲಿ) |
|---|---|---|---|
| 1 | ಹೊಳೆನರಸೀಪುರ | 28 | 5.95 |
| 2 | ಹಾಸನ | 34 | 10.00 |
| 3 | ಅರಕಲಗೂಡು | 34 | 10.40 |
| 4 | ಶ್ರವಣಬೆಳಗೊಳ | 8 | 3.00 |
| 5 | ಮಡಿಕೇರಿ | 53 | 56.11 |
| 6 | ವರುಣ | 7 | 0.90 |
| 7 | ಹೆಚ್.ಡಿ ಕೋಟೆ | 2 | 1.30 |
| 8 | ಮಂಡ್ಯ | 1 | 0.47 |
| 9 | ಮಳವಳ್ಳಿ | 2 | 1.20 |
| 10 | ಮದ್ದೂರು | 3 | 12.73 |
| 11 | ಶ್ರೀರಂಗಪಟ್ಟಣ | 3 | 5.68 |
| 12 | ಕುಣಿಗಲ್ | 1 | 5.00 |
| 13 | ತಿಪಟೂರು | 1 | 3.30 |
| 14 | ತುರುವೇಕೆರೆ | 16 | 10.00 |
| 15 | ಹುಣಸೂರು | 1 | 0.98 |
| 16 | ಚನ್ನಪಟ್ಟಣ | 1 | 0.78 |
| 17 | ಚಾಮುಂಡೇಶ್ವರಿ | 1 | 3.20 |
| 18 | ಟಿ.ನರಸೀಪುರ | 2 | 0.74 |
|  | ಒಟ್ಟು : | **198** | **131.74** |

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಲಿಂಗೇಶ್ ಕೆ.ಎಸ್. ಮತ್ತು ಶ್ರೀ ಸುರೇಶ್ ಗೌಡ ಇವರ ಪ್ರಶ್ನೆ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2188+2189 ಕ್ಕೆ ಅನುಬಂಧ-3

2019-20 ನೇ ಸಾಲಿನಲ್ಲಿ ಬಂಡವಾಳ ಲೆಕ್ಕ ಶೀರ್ಷಿಕೆಯಡಿ ಕಾಮಗಾರಿಗಳಿಗೆ ನಿಗದಿಪಡಿಸಿರುವ ಅನುದಾನದ ವಿವರ

| ಕ್ರ. ಸಂ. | ವಲಯ | ವಿಭಾಗ | ಒಟ್ಟು ಕಾಮಗಾರಿಗಳ ಸಂಖ್ಯೆ | ಉಳಿಕೆ ಮೊತ್ತ (ರೂ.ಕೋಟಿ ಗಳಲ್ಲಿ) | ಅನುದಾನ (ರೂ.ಕೋಟಿ ಗಳಲ್ಲಿ) |
|---|---|---|---|---|---|
| 1 | ನೀರಾವರಿ (ದ) ವಲಯ, ಮೈಸೂರು | ಕೆ.ಆರ್.ಎಸ್ ವಿಭಾಗ, ಕೃಷ್ಣರಾಜಸಾಗರ | 226 | 606.74 | 205.38 |
| 2 | | ವಿ.ಸಿ.ವಿಭಾಗ, ಮಂಡ್ಯ | 445 | 257.88 | 51.20 |
| 3 | | ಕೆಆರ್ಎಸ್ಎಂ & ಎಂಐಪಿ ವಿಭಾಗ, ಮಳವಳ್ಳಿ | 265 | 376.15 | 103.81 |
| 4 | | ಡಿ & ಐ ವಿಭಾಗ, ಬನ್ನೂರು | 41 | 90.41 | 54.00 |
| 5 | | ಮಂಚನಬೆಲೆ ಯೋಜನಾ ವಿಭಾಗ, ರಾಮನಗರ | 331 | 1197.46 | 120.72 |
| 6 | | ಕಬಿನಿ ಜಲಾಶಯ ವಿಭಾಗ, ಕಬಿನಿ ಕಾಲೋನಿ | 59 | 33.86 | 23.33 |
| 7 | | ಕಬಿನಿ ನಾಲಾ ವಿಭಾಗ, ನಂಜನಗೂಡು | 148 | 93.85 | 35.22 |
| 8 | | ಕಬಿನಿ ನಾಲಾ ವಿಭಾಗ, ಟಿ.ನರಸೀಪುರ | 131 | 35.78 | 11.31 |
| 9 | | ನಂ.2 ಕಬಿನಿ ನಾಲಾ ವಿಭಾಗ, ಕೊಳ್ಳೇಗಾಲ | 154 | 152.26 | 19.39 |
| 10 | | ನಂ.2 ವಿ.ಸಿ.ಸಿ ವಿಭಾಗ, ಮೈಸೂರು | 186 | 119.95 | 41.46 |
| 11 | | ಹಾರಂಗಿ ಜಲಾಶಯ ವಿಭಾಗ, ಕುಶಾಲನಗರ | 269 | 412.56 | 93.61 |
| 12 | | ನಂ.2 ಹೆಚ್.ಆರ್.ಬಿ.ಸಿ ವಿಭಾಗ, ಹುಣಸೂರು | 153 | 216.45 | 55.03 |
| 13 | | ಹಾರಂಗಿ ನಾಲಾ ವಿಭಾಗ, ಸಾಲಿಗ್ರಾಮ | 200 | 64.41 | 25.26 |
| 14 | ಹೇಮಾವತಿ ಯೋಜನಾ ವಲಯ, ಗೊರೂರು | ಹೇಮಾವತಿ ಅಣೆಕಟ್ಟು ವಿಭಾಗ, ಗೊರೂರು | 1023 | 632.48 | 131.58 |
| 15 | | ಹೆಚ್ಆರ್ಬಿಹೆಚ್ಎಲ್ಸಿ ವಿಭಾಗ, ಗೊರೂರು | 269 | 483.65 | 96.36 |
| 16 | | ಹೆಚ್ಆರ್ಬಿಸಿ ವಿಭಾಗ, ಹೊಳೆನರಸೀಪುರ. | 636 | 1084.33 | 241.79 |
| 17 | | ಯಗಚಿ ಯೋಜನಾ ವಿಭಾಗ, ಬೇಲೂರು | 225 | 175.23 | 58.37 |
| 18 | | ನಂ.1 ಹೆಚ್ಎಲ್ಬಿಸಿ ವಿಭಾಗ, ಚನ್ನರಾಯಪಟ್ಟಣ | 295 | 391.23 | 63.87 |
| 19 | | ನಂ.3 ಹೆಚ್ಎಲ್ಬಿಸಿ ವಿಭಾಗ, ಕೆ.ಆರ್.ಪೇಟೆ | 110 | 498.92 | 33.64 |
| 20 | | ನಂ.6 ಹೆಚ್ಎಲ್ಬಿಸಿ ವಿಭಾಗ, ಪಾಂಡವಪುರ | 111 | 140.8 | 18.56 |
| 21 | | ನಂ.7 ಹೆಚ್ಎಲ್ಬಿಸಿ ವಿಭಾಗ, ನಾಗಮಂಗಲ | 26 | 63.79 | 40.37 |
| 22 | ಹೇಮಾವತಿ ನಾಲಾ ವಲಯ, ತುಮಕೂರು | ಹೇಮಾವತಿ ನಾಲಾ ವಿಭಾಗ, ತುಮಕೂರು | 108 | 645.29 | 29.02 |
| 23 | | ಹೇಮಾವತಿ ನಾಲಾ ವಿಭಾಗ,ಯಡಿಯೂರು | 239 | 158.4 | 72.09 |
| 24 | | ನಂ.4 ಹೆಚ್ಎಲ್ಬಿಸಿ ವಿಭಾಗ, ತುರುವೇಕೆರೆ | 153 | 511.39 | 178.07 |
| 25 | | ಹೇಮಾವತಿ ನಾಲಾ ತನಿಖಾ ವಿಭಾಗ, ಹೆಬ್ಬೂರು | 196 | 245.402 | 208.91 |
| 26 | | ನಂ.1 ಕಾನೀನಿಸಿ ವಿಭಾಗ, ನಾಗವಲ್ಲಿ | 7 | 52.53 | 16.53 |
| | | ಒಟ್ಟು : | 6006 | 8741.202 | 2028.87 |

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 34 ಎಲ್‌ಎಕ್ಯೂ 20

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:09-06-20

ಇಂದ:

ಸರ್ಕಾರದ ಕಾರ್ಯದರ್ಶಿಗಳು,
ಜಲ ಸಂಪನ್ಮೂಲ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ / ~~ಪರಿಷತ್ತು~~,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಶ್ರೀನಿವಾಸ್‌ಮೂರ್ತಿ. ಕೆ. ರವರ ಚುಕ್ಕೆ ಗುರುತಿನ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2023ಕ್ಕೆ ಉತ್ತರಗಳನ್ನು ಸಲ್ಲಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಶ್ರೀನಿವಾಸ್‌ಮೂರ್ತಿ. ಕೆ. ರವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ:2023ಕ್ಕೆ ಜಲಸಂಪನ್ಮೂಲ ಇಲಾಖೆಯು ನೀಡಿರುವ ಉತ್ತರದ 10 ಪ್ರತಿಗಳನ್ನು ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,
(ಸಹಿ)
ಶಾಖಾಧಿಕಾರಿ
ಜಲಸಂಪನ್ಮೂಲ ಇಲಾಖೆ (ಎಂಎಂಇ-2)

Recd
09/06/2020

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು.
2. ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ
4. ಸರ್ಕಾರದ ಅಧೀನ ಕಾರ್ಯದರ್ಶಿಗಳು-[illegible], ಜಲಸಂಪನ್ಮೂಲ ಇಲಾಖೆ

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2023
2. ಸದಸ್ಯರ ಹೆಸರು : ಡಾ॥ ಶ್ರೀನಿವಾಸಮೂರ್ತಿ ಕೆ.
3. ಉತ್ತರಿಸಬೇಕಾದ ದಿನಾಂಕ : 17-03-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ನೆಲಮಂಗಲ ವಿಧಾನಸಭಾ ಕ್ಷೇತ್ರದ ಡಾಬಸ್‌ಪೇಟೆ ಕೈಗಾರಿಕಾ ಪ್ರದೇಶಕ್ಕೆ ಹೇಮಾವತಿ ನದಿಯಿಂದ ನೀರು ಹರಿಸುವ ವಿಷಯವು ಸರ್ಕಾರದ ಆಲೋಚನೆಯಲ್ಲಿದೆಯೇ ; | ತುಮಕೂರು ನಗರಕ್ಕೆ ಕುಡಿಯುವ ನೀರಿಗಾಗಿ ಹೇಮಾವತಿ ಯೋಜನೆಯಲ್ಲಿ ಒದಗಿಸಲಾಗಿರುವ 1.135 ಟಿ.ಎಂ.ಸಿ. ನೀರಿನ ಪ್ರಮಾಣದ ಪರಿಮಿತಿಯಲ್ಲಿ ಡಾಬಾಸ್‌ಪೇಟೆ ಕೈಗಾರಿಕಾ ಪ್ರದೇಶಕ್ಕೆ ಕೆ.ಐ.ಎ.ಡಿ.ಬಿ.ರವರ ಮುಖಾಂತರ ನೀರನ್ನು ಒದಗಿಸಲು ಬುಗುಡನಹಳ್ಳಿ ಕೆರೆಯಿಂದ ಮೈದಾಳ ಕೆರೆಗೆ 192 ಎಂ.ಸಿ.ಎಫ್.ಟಿ. ನೀರು ಹಾಗೂ ಮೈದಾಳ ಕೆರೆಯಿಂದ ಡಾಬಸ್‌ಪೇಟೆ ಪ್ರದೇಶಕ್ಕೆ ನೀರು ಒದಗಿಸುವ ಯೋಜನೆಗೆ ದಿನಾಂಕ:28-01-2009 ರಂದು ನೀರಿನ ಹಂಚಿಕೆ ಮಾಡಲಾಗಿದೆ. |
| ಆ | ಸದರಿ ಕೈಗಾರಿಕಾ ಪ್ರದೇಶಕ್ಕೆ ಹೇಮಾವತಿ ನದಿಯಿಂದ ನೀರು ಹರಿಸುವ ಕಾರ್ಯವು ಯಾವ ಹಂತದಲ್ಲಿದೆ ; | **ಮುಖ್ಯ ಅಭಿವೃದ್ಧಿ ಅಧಿಕಾರಿಗಳು ಹಾಗೂ ಮುಖ್ಯ ಇಂಜಿನಿಯರ್-1, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ರವರು ಈ ಕೆಳಕಂಡಂತೆ ವರದಿ ಮಾಡಿರುತ್ತಾರೆ :**<br><br>ಬುಗುಡನಹಳ್ಳಿ ಕೆರೆಯಿಂದ ಡಾಬಸ್‌ಪೇಟೆವರೆಗಿನ ಮಾರ್ಗದ 36.86 ಕಿ.ಮೀ. ರಷ್ಟು ಪೈಪ್‌ಲೈನ್ ಪೈಕಿ 17.20 ಕಿ.ಮೀ.ವರೆಗೆ ಪೈಪ್‌ಲೈನ್ ಕಾಮಗಾರಿಯನ್ನು ನಿರ್ವಹಿಸಲಾಗಿದೆ. ದಿನಾಂಕ :30-11-2013 ರ ತುಮಕೂರು ಮಹಾನಗರ ಪಾಲಿಕೆಯ ಸಭೆಯ ನಿರ್ಣಯದಂತೆ ಬುಗುಡನಹಳ್ಳಿ ಕೆರೆಯಿಂದ ಕೈಗಾರಿಕಾ ಪ್ರದೇಶಕ್ಕೆ ನೀರು ಸರಬರಾಜು ಮಾಡಲು ಒಪ್ಪಿಗೆಯನ್ನು ನಿರಾಕರಿಸಲಾಗಿದ್ದರಿಂದ ನವೆಂಬರ್'2017 ರಂದು ಗುತ್ತಿಗೆದಾರರು ಕೆಲಸವನ್ನು ಸ್ಥಗಿತಗೊಳಿಸಿರುತ್ತಾರೆ. ಹಲವಾರು ನೋಟೀಸ್‌ಗಳನ್ನು ನೀಡಿದ ನಂತರ ದಿನಾಂಕ :21-01-2020 ರಂದು ಮಂಡಳಿಯಿಂದ ಗುತ್ತಿಗೆಯನ್ನು ರದ್ದುಗೊಳಿಸಲಾಗಿದೆ.<br><br>ಉಳಿಕೆ ಕಾಮಗಾರಿಯನ್ನು 2 ಹಂತದಲ್ಲಿ ಕೈಗೊಳ್ಳಲು ತೀರ್ಮಾನಿಸಿ, ಮೊದಲ ಹಂತದಲ್ಲಿ ಬುಗುಡನಹಳ್ಳಿ ಕೆರೆಯ ಬದಲು ಹೊನ್ನೇನಹಳ್ಳಿ ಕೆರೆಯಿಂದ ದೇವರಾಯಪಟ್ಟಣ, ಮೈದಾಳ ಕೆರೆ ಮಾರ್ಗವಾಗಿ ಹಿರೇಹಳ್ಳಿ ಕೈಗಾರಿಕಾ ಪ್ರದೇಶಕ್ಕೆ ನೀರು ಸರಬರಾಜು ಮಾಡುವ ಕಾಮಗಾರಿಗೆ ಟೆಂಡರ್ ಆಹ್ವಾನಿಸಲಾಗಿರುತ್ತದೆ. 2ನೇ ಹಂತದಲ್ಲಿ ಮೈದಾಳ ಕೆರೆಯಿಂದ ಡಾಬಸ್‌ಪೇಟೆ ಕೈಗಾರಿಕಾ ಪ್ರದೇಶಕ್ಕೆ ನೀರು ಸರಬರಾಜು ಮಾಡಲು ಉದ್ದೇಶಿಸಲಾಗಿದೆ. |
| ಇ | ಹಿಂದಿನ ಅಧಿವೇಶನದಲ್ಲಿ ನೀಡಿರುವ ಉತ್ತರದ ಪ್ರಕಾರ ಇದುವರೆಗೂ ನೀರು ಹರಿಸದೇ ಇರಲು ಕಾರಣವೇನು ; | ಮೇಲ್ಕಂಡ ಕಾರಣಗಳಿಂದ ಡಾಬಸ್‌ಪೇಟೆ ಕೈಗಾರಿಕಾ ಪ್ರದೇಶಕ್ಕೆ ನೀರು ಹರಿಸಲು ಸಾಧ್ಯವಾಗಿರುವುದಿಲ್ಲ. |
| ಈ | ಈ ಕೈಗಾರಿಕಾ ಪ್ರದೇಶಕ್ಕೆ ಯಾವಾಗ ನೀರನ್ನು ಹರಿಸಲಾಗುವುದು (ವಿವರ ನೀಡುವುದು) ? | ಮೊದಲ ಹಂತಕ್ಕೆ ಮಂಡಳಿ ವತಿಯಿಂದ ಟೆಂಡರ್ ಆಹ್ವಾನಿಸಿದ್ದು, ಸದರಿ ಕಾಮಗಾರಿಯು ಪೂರ್ಣಗೊಂಡ ನಂತರ 2ನೇ ಹಂತದಲ್ಲಿ ಮೈದಾಳ ಕೆರೆಯಿಂದ ಡಾಬಸ್‌ಪೇಟೆ ಕೈಗಾರಿಕಾ ಪ್ರದೇಶಕ್ಕೆ ನೀರು ಸರಬರಾಜು ಮಾಡಲು ಕ್ರಮ ಕೈಗೊಳ್ಳಲಾಗುವುದು. |

*ಸಂಖ್ಯೆ:ಜಸಂಇ 34 ಎನ್‌ಎಲ್‌ಎ 2020*

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 30 ಎನ್‌ಎಲ್‌ಎ 20

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 09-06-20

ಇಂದ:

ಸರ್ಕಾರದ ಕಾರ್ಯದರ್ಶಿಗಳು,
ಜಲ ಸಂಪನ್ಮೂಲ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ / ~~ಪರಿಷತ್ತು~~,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಮಂಜುನಾಥ್. ಹೆಚ್. ಪಿ. ರವರ ಚುಕ್ಕೆ ~~ಗುರುತಿನ~~ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1215 ಕ್ಕೆ ಉತ್ತರಗಳನ್ನು ಕಳ್ಳಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಮಂಜುನಾಥ್. ಹೆಚ್. ಪಿ. ರವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1215 ಕ್ಕೆ ಜಲಸಂಪನ್ಮೂಲ ಇಲಾಖೆಯು ನೀಡಿರುವ ಉತ್ತರದ 10 ಪ್ರತಿಗಳನ್ನು ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

V. Gupta

ಶಾಖಾಧಿಕಾರಿ
ಜಲಸಂಪನ್ಮೂಲ ಇಲಾಖೆ (ಎಂಎಂಐ-2)

Recd
09/06/2020

ಪ್ರತಿಯನ್ನು, ಮಾಹಿತಿಗಾಗಿ:

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು.
2. ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ
4. ಸರ್ಕಾರದ ಅಧೀನ ಕಾರ್ಯದರ್ಶಿಗಳು-[illegible], ಜಲಸಂಪನ್ಮೂಲ ಇಲಾಖೆ

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1215
2. ಸದಸ್ಯರ ಹೆಸರು : ಶ್ರೀ ಮಂಜುನಾಥ್ ಹೆಚ್. ಪಿ.
3. ಉತ್ತರಿಸಬೇಕಾದ ದಿನಾಂಕ : 17-03-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹುಣಸೂರು ತಾಲ್ಲೂಕಿನಲ್ಲಿ 49 ಕೆರೆಗಳಿಗೆ ಮರದೂರು ಗ್ರಾಮದ ಹತ್ತಿರ ಲಕ್ಷ್ಮಣತೀರ್ಥ ನದಿಯಿಂದ ಏತ ನೀರಾವರಿ ಮೂಲಕ ನೀರು ತುಂಬಿಸುವ ಯೋಜನೆಯ ಪ್ರಸ್ತಾವನೆಯು ಕಾವೇರಿ ನೀರಾವರಿ ನಿಗಮದಿಂದ ಸರ್ಕಾರಕ್ಕೆ ಸ್ವೀಕೃತವಾಗಿದೆಯೇ; | ಹೌದು. |
| ಆ | ಸದರಿ ಯೋಜನೆಯಿಂದ ಎಷ್ಟು ಕೆರೆಗಳು, ಅಚ್ಚುಕಟ್ಟು ಪ್ರದೇಶ ಹಾಗೂ ಗ್ರಾಮಗಳಿಗೆ ಅನುಕೂಲವಾಗುತ್ತದೆ ; (ಯೋಜನೆಯ ವಿವರ ನೀಡುವುದು) | ಸದರಿ ಯೋಜನೆಯಿಂದ 49 ಕೆರೆಗಳನ್ನು ತುಂಬಿಸಲು ಯೋಜಿಸಲಾಗಿದ್ದು, ಒಟ್ಟು 24 ಗ್ರಾಮಗಳಿಗೆ ಅನುಕೂಲವಾಗುತ್ತದೆ. ಕುಡಿಯುವ ನೀರಿಗಾಗಿ ಕೆರೆ ತುಂಬಿಸುವ ಯೋಜನೆ ಆಗಿರುವುದರಿಂದ ನೀರಾವರಿ ಅಚ್ಚುಕಟ್ಟು ಪ್ರದೇಶಕ್ಕೆ ನೀರೋದಗಿಸುವ ಉದ್ದೇಶ ಇರುವುದಿಲ್ಲ. ಸದರಿ ಯೋಜನೆಯಿಂದ ಅನುಕೂಲವಾಗುವ ಗ್ರಾಮಗಳ ಹಾಗೂ ಕೆರೆಗಳ ವಿವರವನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಇ | ಪ್ರಸ್ತುತ ಸದರಿ ಪ್ರಸ್ತಾವನೆ ಯಾವ ಹಂತದಲ್ಲಿದೆ ಹಾಗೂ ಅನುಮೋದನೆ ನೀಡುವ ಕುರಿತು ಸರ್ಕಾರದ ಅಭಿಪ್ರಾಯವೇನು? | ಸದರಿ ಯೋಜನೆಯನ್ನು ಮುಂದಿನ ಆರ್ಥಿಕ ವರ್ಷಗಳಲ್ಲಿ ಕೈಗೊಳ್ಳುವ ಬಗ್ಗೆ ಪರಿಶೀಲಿಸುವಂತೆ ಆರ್ಥಿಕ ಇಲಾಖೆಯು ಸೂಚಿಸಿದೆ. |

***ಸಂಖ್ಯೆ:ಜಸಂಇ 30 ಎನ್‌ಎಲ್‌ಎ 2020***

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 38 ಎನ್‌ಎಲ್‌ಎ 20

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 09-06-20

ಇಂದ:

ಸರ್ಕಾರದ ಕಾರ್ಯದರ್ಶಿಗಳು,
ಜಲ ಸಂಪನ್ಮೂಲ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ / ~~ಪರಿಷತ್ತು~~,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಮುನಿರಾಜು ಜಯರಾಮ್ ರವರ ಚುಕ್ಕೆ ~~ಗುರುತಿನ~~ ಗುರುತಿಲ್ಲದ ಪ್ರಶ್ನೆ ಸಂಖ್ಯೆ 2193 ಕ್ಕೆ ಉತ್ತರಗಳನ್ನು ಸಲ್ಲಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಮುನಿರಾಜು ಜಯರಾಮ್ ರವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2193 ಕ್ಕೆ ಜಲಸಂಪನ್ಮೂಲ ಇಲಾಖೆಯು ನೀಡಿರುವ ಉತ್ತರದ 10 ಪ್ರತಿಗಳನ್ನು ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,
V. Guru
ಶಾಖಾಧಿಕಾರಿ
ಜಲಸಂಪನ್ಮೂಲ ಇಲಾಖೆ (ಎಂಎಂಐ-2)

Rcvd 09/06/2020

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು.
2. ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ
4. ಸರ್ಕಾರದ ಅಧೀನ ಕಾರ್ಯದರ್ಶಿಗಳು-..., ಜಲಸಂಪನ್ಮೂಲ ಇಲಾಖೆ

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2193
2. ಸದಸ್ಯರ ಹೆಸರು : ಶ್ರೀ ಮಸಾಲ ಜಯರಾಮ್
3. ಉತ್ತರಿಸಬೇಕಾದ ದಿನಾಂಕ : 17-03-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ತುಮಕೂರು ಜಿಲ್ಲಾ ವ್ಯಾಪ್ತಿಯ ಹೇಮಾವತಿ ನಾಲೆಗಳಲ್ಲಿ ಹೆಚ್ಚಿನದಾಗಿ ಹೂಳು ತುಂಬಿ ನಾಲೆಗಳ ದಂಡೆಗಳು ಒಡೆದು ದುರಸ್ಥಿಯಾಗಬೇಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ತುಮಕೂರು ಜಿಲ್ಲಾ ವ್ಯಾಪ್ತಿಯ ಹೇಮಾವತಿ ನಾಲೆಗಳಲ್ಲಿ ಹೂಳು ತುಂಬಿ ನಾಲೆಗಳ ದಂಡೆಗಳು ಒಡೆದಿರುವ ಯಾವುದೇ ಪ್ರಕರಣಗಳು ಪ್ರಸಕ್ತ ಸಾಲಿನಲ್ಲಿ ಕಂಡುಬಂದಿರುವುದಿಲ್ಲ. |
| ಆ | ಬಂದಿದ್ದಲ್ಲಿ, ಸದರಿ ನಾಲೆಗಳ ದುರಸ್ಥಿ ಹಾಗೂ ಹೂಳು ತೆಗೆಯುವ ಬಗ್ಗೆ ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು; | ಅವಶ್ಯವಿರುವ ಸರಪಳಿಗಳಲ್ಲಿ ನಿರ್ವಹಣಾ ಕಾಮಗಾರಿಗಳಾದ ಜಾರಿಬಿದ್ದ ಮಣ್ಣು ಮತ್ತು ಜಂಗಲ್ ತೆಗೆಸಲು 2020-21 ನೇ ಸಾಲಿನ ಕಾರ್ಯಕ್ರಮ ಪಟ್ಟಿಯನ್ನು ಕಾವೇರಿ ನೀರಾವರಿ ನಿಗಮದಿಂದ ತಯಾರಿಸಿದ್ದು, ಅನುಮೋದನೆ ಪ್ರಕ್ರಿಯೆ ಜಾರಿಯಲ್ಲಿದೆ. 2020-21 ನೇ ಸಾಲಿನಲ್ಲಿ ನಾಲೆಯಲ್ಲಿ ನೀರನ್ನು ಹರಿಸುವ ಮುನ್ನ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗುವುದು. |
| ಇ | ಹೇಮಾವತಿ ಜಲಾಶಯದಿಂದ ನೀರು ಬಿಡುಗಡೆ ಮಾಡುವ ಮುನ್ನವೇ ನಾಲೆಗಳನ್ನು ದುರಸ್ಥಿಪಡಿಸಿ ಹೂಳು ತೆಗೆಯುವ ಕಾರ್ಯವನ್ನು ಯಾವಾಗ ಕೈಗೆತ್ತಿಕೊಂಡು ಪೂರ್ಣಗೊಳಿಸಲಾಗುವುದು? | |

*ಸಂಖ್ಯೆ:ಜಸಂಇ 38 ಎನ್‌ಎಲ್‌ಎ 2020*

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 32 ಎಸ್‌ಎಲ್‌ಎ 20

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 09-06-20

ಇಂದ:

ಸರ್ಕಾರದ ಕಾರ್ಯದರ್ಶಿಗಳು,
ಜಲ ಸಂಪನ್ಮೂಲ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ / ~~ಪರಿಷತ್ತು~~,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಶ್ರೀನಿವಾಸ್. ಎಂ. ರವರ ಚುಕ್ಕೆ ~~ಗುರುತಿನ~~ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1453 ಕ್ಕೆ ಉತ್ತರಗಳನ್ನು ಸಲ್ಲಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಶ್ರೀನಿವಾಸ್. ಎಂ. ರವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ:1453ಕ್ಕೆ ಜಲಸಂಪನ್ಮೂಲ ಇಲಾಖೆಯು ನೀಡಿರುವ ಉತ್ತರದ 10 ಪ್ರತಿಗಳನ್ನು ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

(ಸಹಿ)

ಶಾಖಾಧಿಕಾರಿ
ಜಲಸಂಪನ್ಮೂಲ ಇಲಾಖೆ (ಎಂಎಂಐ-2)

Recd 09/06/2020

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು.
2. ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ
4. ಸರ್ಕಾರದ ಅಧೀನ ಕಾರ್ಯದರ್ಶಿಗಳು-2, ಜಲಸಂಪನ್ಮೂಲ ಇಲಾಖೆ

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1453
2. ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ
3. ಉತ್ತರಿಸಬೇಕಾದ ದಿನಾಂಕ : 17-03-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮಂಡ್ಯ ವಿಧಾನಸಭಾ ಕ್ಷೇತ್ರಕ್ಕೆ 2018-19 ಮತ್ತು 2019-20 ನೇ ಸಾಲಿನಲ್ಲಿ ಜಲಸಂಪನ್ಮೂಲ ಇಲಾಖೆಯ ಕಾಮಗಾರಿಗಳಿಗೆ ಮಂಜೂರಾದ ಅನುದಾನವೆಷ್ಟು; | ಮಂಡ್ಯ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ 2018-19ನೇ ಸಾಲಿನಲ್ಲಿ ರೂ.516.53 ಕೋಟಿ ಮತ್ತು 2019-20ನೇ ಸಾಲಿನಲ್ಲಿ ರೂ.40.72 ಕೋಟಿ ಮೊತ್ತದ ಜಲಸಂಪನ್ಮೂಲ ಇಲಾಖೆಯ ಕಾಮಗಾರಿಗಳನ್ನು ಕೈಗೊಳ್ಳಲು ಉದ್ದೇಶಿಸಲಾಗಿತ್ತು. |
| ಆ | ಮಂಜೂರಾಗಿದ್ದ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆ ಪೂರ್ಣಗೊಳ್ಳುವ ಹಂತದಲ್ಲಿರುವಾಗ, ಕಾಮಗಾರಿಗಳನ್ನು ತಡೆಹಿಡಿದಿರಲು ಕಾರಣವೇನು; | ರಾಜ್ಯದಲ್ಲಿ ಪ್ರವಾಹದಿಂದ ಉಂಟಾಗಿರುವ ತತ್ಪರಿಣಾಮಗಳ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಆಡಳಿತಾತ್ಮಕ ಹಿತದೃಷ್ಟಿಯಿಂದ ಹಾಗೂ ಆರ್ಥಿಕ ಮಿತವ್ಯಯತೆಯನ್ನು ಕಾಯ್ದುಕೊಳ್ಳುವ ಹಿತದೃಷ್ಟಿಯಿಂದ ದಿನಾಂಕ:20-09-2019 ರಂದು ನಡೆದ ಕಾವೇರಿ ನೀರಾವರಿ ನಿಗಮ ಮಂಡಳಿಯ 70ನೇ ಸಭೆಯ ನಿರ್ಣಯದಂತೆ ಇನ್ನೂ ಅನುಷ್ಠಾನಗೊಳ್ಳದೆ ವಿವಿಧ ಪ್ರಕ್ರಿಯೆಯಲ್ಲಿರುವ ಕಾಮಗಾರಿಗಳನ್ನು ಕೈಬಿಡಲಾಗಿದೆ. |
| ಇ | ಸದರಿ ತಡೆಹಿಡಿದಿರುವ ಕಾಮಗಾರಿಗಳಿಗೆ ಯಾವಾಗ ಚಾಲನೆ ನೀಡಲಾಗುವುದು? | ಮುಂದಿನ ವರ್ಷಗಳಲ್ಲಿ ಅವಶ್ಯಕತೆಗನುಸಾರವಾಗಿ ಮತ್ತು ಅನುದಾನದ ಲಭ್ಯತೆಯ ಆಧಾರದಲ್ಲಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಕ್ರಮ ವಹಿಸಲಾಗುವುದು. |

*ಸಂಖ್ಯೆ:ಜಸಂಇ 32 ಎಲ್‌ಎಕ್ಯೂ 2020*

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 37 ಎಂಎಲ್ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 04.06.2020.

ಇಂದ:

ಸರ್ಕಾರದ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ತಮ್ಮಣ್ಣ ಡಿ.ಸಿ. (ಮದ್ದೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1456ರ ಬಗ್ಗೆ.

****

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ತಮ್ಮಣ್ಣ ಡಿ.ಸಿ. ಮದ್ದೂರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1456 ಕ್ಕೆ ಉತ್ತರಗಳನ್ನು ಸಿದ್ಧಪಡಿಸಿ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,

Shubha K 04/06/2020

(ಶುಭಾ ಕೆ),
ತಾಂತ್ರಿಕ ಸಹಾಯಕರು (ತಾಂತ್ರಿಕ-6),
ಜಲಸಂಪನ್ಮೂಲ ಇಲಾಖೆ.

ಪ್ರತಿಯನ್ನು:

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, ಬೆಂಗಳೂರು.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, ಬೆಂಗಳೂರು.
4. ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು
5. ಸರ್ಕಾರದ ಉಪ ಕಾರ್ಯದರ್ಶಿ (ಸೇವೆಗಳು), ಇವರ ಆಪ್ತ ಸಹಾಯಕರು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
6. ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಬಿ), ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1456
ಸದಸ್ಯರ ಹೆಸರು: ಶ್ರೀ ತಮ್ಮಣ್ಣ ಡಿ.ಸಿ. (ಮದ್ದೂರು)
ಉತ್ತರಿಸಬೇಕಾದ ದಿನಾಂಕ: 17.03.2020
ಉತ್ತರಿಸುವ ಸಚಿವರು: ಜಲಸಂಪನ್ಮೂಲ ಸಚಿವರು

| ಕ್ರಮ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕಳೆದ ಮೂರು ವರ್ಷಗಳಲ್ಲಿ ಕಾವೇರಿ ನೀರಾವರಿ ನಿಗಮ, ಕರ್ನಾಟಕ ನೀರಾವರಿ ನಿಗಮ ಮತ್ತು ಕೃಷ್ಣ ಭಾಗ್ಯ ಜಲ ನಿಗಮಗಳಿಗೆ ಪ್ರತಿ ವರ್ಷ ನೀಡಿರುವ ಅನುದಾನದ ಮೊತ್ತವೆಷ್ಟು; (ವರ್ಷ ಮತ್ತು ನಿಗಮಗಳವಾರು ಸಂಪೂರ್ಣ ಮಾಹಿತಿ ನೀಡುವುದು) | ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ. | ಪ್ರತಿ ವರ್ಷ ಅನುದಾನದಲ್ಲಿ ಪ್ರತಿ ನಿಗಮಗಳಲ್ಲಿ ಬಳಕೆಯಾಗಿರುವ ಅನುದಾನದ ಮತ್ತು ಉಳಿಕೆಯಾಗಿರುವ ಮೊತ್ತವೆಷ್ಟು (ವರ್ಷ ಮತ್ತು ನಿಗಮಗಳವಾರು ಸಂಪೂರ್ಣ ಮಾಹಿತಿ ನೀಡುವುದು) | |
| ಇ. | ಪ್ರತಿ ವರ್ಷ ನೀಡಿರುವ ಅನುದಾನದಲ್ಲಿ ಯಾವ ಯಾವ ಕಾಮಗಾರಿಗಳಿಗೆ ಅನುದಾನವನ್ನು ಬಳಕೆ ಮಾಡಲಾಗಿದೆ? (ವರ್ಷ ಮತ್ತು ನಿಗಮಗಳವಾರು ಸಂಪೂರ್ಣ ಮಾಹಿತಿ ನೀಡುವುದು) | ಜಲಸಂಪನ್ಮೂಲ ಇಲಾಖೆಯ ನಿಗಮಗಳಡಿಯಲ್ಲಿ ನೀರಾವರಿ ಸೌಲಭ್ಯ ಕಲ್ಪಿಸುವ ಯೋಜನೆಗಳು, ಕುಡಿಯುವ ನೀರು ಹಾಗೂ ಅಂತರ್ಜಲ ಅಭಿವೃದ್ಧಿ ಪಡಿಸಲು ಕೆರೆ ತುಂಬಿಸುವ ಯೋಜನೆಗಳು, ನಾಲಾ ಆಧುನೀಕರಣ ಕಾಮಗಾರಿಗಳು, ಏತ ನೀರಾವರಿ ಯೋಜನೆ ಕಾಮಗಾರಿಗಳು ಹಾಗೂ ಎಸ್.ಸಿ.ಪಿ ಮತ್ತು ಟಿ.ಎಸ್.ಪಿ ಯೋಜನೆಗಳಡಿಯಲ್ಲಿನ ಕಾಮಗಾರಿಗಳಿಗೆ ಅನುದಾನವನ್ನು ಬಳಕೆ ಮಾಡಲಾಗುತ್ತಿದೆ. |

ಜಸಂಇ 37 ಎಂಎಲ್ಎ 2020

(ರಮೇಶ್ ಲ ಜಾರಕಿಹೊಳಿ),
ಜಲಸಂಪನ್ಮೂಲ ಸಚಿವರು.

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ತಮ್ಮಣ್ಣ ಡಿ.ಸಿ (ಮದ್ದೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1456 ಕ್ಕೆ ಉತ್ತರಗಳು

ಅನುಬಂಧ

ರೂ. ಕೋಟಿಗಳಲ್ಲಿ

| ನಿಗಮ | 2016-17 | | | | 2017-18 | | | | 2018-19 | | | |
|---|---|---|---|---|---|---|---|---|---|---|---|---|
| | ಆಯವ್ಯಯ ಅನುದಾನ (B.E) | ಅನುದಾನ (R.E) | ಬಿಡುಗಡೆ | ವೆಚ್ಚ | ಆಯವ್ಯಯ ಅನುದಾನ (B.E) | ಅನುದಾನ (R.E) | ಬಿಡುಗಡೆ | ವೆಚ್ಚ | ಆಯವ್ಯಯ ಅನುದಾನ (B.E) | ಅನುದಾನ (R.E) | ಬಿಡುಗಡೆ | ವೆಚ್ಚ |
| ಕೃಷ್ಣಾ ಭಾಗ್ಯ ಜಲ ನಿಗಮ | 5290.12 | 4598.15 | 4472.06 | 4139.55 | 6817.85 | 5008.98 | 4922.80 | 4427.93 | 6196.28 | 4762.38 | 4637.92 | 4335.07 |
| ಕರ್ನಾಟಕ ನೀರಾವರಿ ನಿಗಮ | 4830.44 | 4077.96 | 4073.48 | 4132.26 | 3601.37 | 3610.99 | 3591.58 | 3739.83 | 4255.79 | 5166.25 | 5079.83 | 4716.64 |
| ಕಾವೇರಿ ನೀರಾವರಿ ನಿಗಮ | 1928.97 | 2086.50 | 2086.50 | 2086.50 | 2196.84 | 2071.53 | 2031.00 | 2031.00 | 2500.07 | 2824.35 | 2820.83 | 2637.24 |

ಟಿಪ್ಪಣಿ: ವೆಚ್ಚವು ಪ್ರಾರಂಭಿಕ ಮೊತ್ತವನ್ನು ಒಳಗೊಂಡಿರುತ್ತದೆ.

# ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 35 ಎಂಎಲ್‌ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 04.06.2020.

ಇಂದ:

ಸರ್ಕಾರದ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1221ರ ಬಗ್ಗೆ.

****

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1221 ಕ್ಕೆ ಉತ್ತರಗಳನ್ನು ಸಿದ್ಧಪಡಿಸಿ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,

Shubha K. 04/06/2020

(ಶುಭಾ ಕೆ),
ತಾಂತ್ರಿಕ ಸಹಾಯಕರು (ತಾಂತ್ರಿಕ-6),
ಜಲಸಂಪನ್ಮೂಲ ಇಲಾಖೆ.

ಪ್ರತಿಯನ್ನು:

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, ಬೆಂಗಳೂರು.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, ಬೆಂಗಳೂರು.
4. ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು
5. ಸರ್ಕಾರದ ಉಪ ಕಾರ್ಯದರ್ಶಿ (ಸೇವೆಗಳು), ಇವರ ಆಪ್ತ ಸಹಾಯಕರು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
6. ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಬಿ), ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1221
ಸದಸ್ಯರ ಹೆಸರು: ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ)
ಉತ್ತರಿಸಬೇಕಾದ ದಿನಾಂಕ: 17.03.2020
ಉತ್ತರಿಸುವ ಸಚಿವರು: ಜಲಸಂಪನ್ಮೂಲ ಸಚಿವರು

| ಕ್ರಮ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ವಿವಿಧ ಏತ ನೀರಾವರಿ ಯೋಜನೆಗಳಿಂದ ವಿದ್ಯುತ್ ಬಿಲ್ ಪಾವತಿಸದ ಕಾರಣ ವಿದ್ಯುತ್ ಸಂಪರ್ಕವನ್ನು ಕಡಿತಗೊಳಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೃಷ್ಣಾ ಭಾಗ್ಯ ಜಲ ನಿಗಮ, ಕರ್ನಾಟಕ ನೀರಾವರಿ ನಿಗಮ ಮತ್ತು ವಿಶ್ವೇಶ್ವರಯ್ಯ ಜಲ ನಿಗಮ ನಿಯಮಿತಗಳಡಿಯಲ್ಲಿ ನಿರ್ವಹಣೆಯಲ್ಲಿರುವ ಏತ ನೀರಾವರಿ ಯೋಜನೆಗಳಿಗೆ ಸಂಬಂಧಪಟ್ಟಂತೆ ವಿದ್ಯುತ್ ಬಿಲ್ಲುಗಳನ್ನು ಕಾಲ ಕಾಲಕ್ಕೆ ಪಾವತಿಸಲಾಗುತ್ತಿದೆ ಹಾಗೂ ವಿದ್ಯುತ್ ಬಿಲ್ಲು ಪಾವತಿಸದ ಕಾರಣ ವಿದ್ಯುತ್ ಸಂಪರ್ಕವನ್ನು ಕಡಿತಗೊಳಿಸಿರುವ ಯಾವುದೇ ಪ್ರಕರಣಗಳು ಇರುವುದಿಲ್ಲ.<br>ಆದರೆ, ಕಾವೇರಿ ನೀರಾವರಿ ನಿಗಮದ ವ್ಯಾಪ್ತಿಯಲ್ಲಿ ಪ್ರಸ್ತುತ 56 ಸಂಖ್ಯೆ ಏತ ನೀರಾವರಿ ಯೋಜನೆಗಳು ನಿರ್ವಹಣೆಯಲ್ಲಿದ್ದು, 41 ಏತ ನೀರಾವರಿ ಯೋಜನೆಗಳಡಿ ರೂ. 4614.64 ಲಕ್ಷಗಳ ವಿದ್ಯುತ್ ಬಿಲ್ ಪಾವತಿ ಬಾಕಿ ಇರುತ್ತದೆ. ಸದರಿ ವಿದ್ಯುತ್ ಬಿಲ್ಲುಗಳನ್ನು ಕಾವೇರಿ ನೀರಾವರಿ ನಿಗಮದ ವತಿಯಿಂದ ಹಂಚಿಕೆಯಾಗುವ ಅನುದಾನದ ಲಭ್ಯತೆ ಅನುಸಾರ ಪಾವತಿಸಲಾಗುತ್ತಿದೆ ಎಂದು ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ರವರು ವರದಿಸಿರುತ್ತಾರೆ. |
| ಆ. | ಹಾಗಿದ್ದಲ್ಲಿ, ವಿದ್ಯುತ್ ಬಿಲ್ ಪಾವತಿಸದಿರಲು ಕಾರಣಗಳೇನು; | |
| ಇ. | ಹಾಗಿದ್ದಲ್ಲಿ, ಸರ್ಕಾರವೇ ವಿದ್ಯುತ್ ಬಿಲ್ ಪಾವತಿಸಲು ಕ್ರಮ ಕೈಗೊಳ್ಳುವುದೇ? | |

ಜಸಂಇ 35 ಎಂಎಲ್ಎ 2020

(ರಮೇಶ್ ಲ ಜಾರಕಿಹೊಳಿ),
ಜಲಸಂಪನ್ಮೂಲ ಸಚಿವರು.

## ಕರ್ನಾಟಕ ಸರ್ಕಾರ

ಸಂಖ್ಯೆ:ಗ್ರಾಅಪ:01/87:ಆರ್‌ಆರ್‌ಸಿ:2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,ಬೆಂಗಳೂರು
ದಿನಾಂಕ:13.08.2020.

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

LAQ 2180
Transferred from PWD

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಕೊಠಡಿ ಸಂ:121, ಮೊದಲನೆ ಮಹಡಿ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೇ,**

**ವಿಷಯ:** ವಿಧಾನಸಭೆ ಸದಸ್ಯರ ಚುಕ್ಕೆ ಗುರುತಿನ/ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2180ಗೆ ಉತ್ತರವನ್ನು ಒದಗಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನಸಭೆ ಚುಕ್ಕೆ ಗುರುತಿನ/ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2180ಗೆ ಉತ್ತರವನ್ನು ಸಿದ್ಧಪಡಿಸಿ 6 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಿದೆ.

ತಮ್ಮ ವಿಶ್ವಾಸಿ,

13/8/20

(ರಮೇಶ್. ಡಿ.ಬಿ)
ಉಪ ನಿರ್ದೇಶಕರು (ಸುಗ್ರಾಯೋ) ಹಾಗೂ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

Recd
13/08/2020

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2180 |
| ಸದಸ್ಯರ ಹೆಸರು | ಶ್ರೀ ಶಿವಲಿಂಗೇಗೌಡ ಕೆ.ಎಂ (ಅರಸೀಕೆರೆ) |
| ಉತ್ತರಿಸಬೇಕಾದ ದಿನಾಂಕ | 17.03.2020 |

**ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆಯಿಂದ ವರ್ಗಾಯಿತ**

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಜಿಲ್ಲಾ ಪಂಚಾಯತ್ ಕೆರೆಗಳನ್ನು ಸಣ್ಣ ನೀರಾವರಿ ಇಲಾಖೆಗೆ ಹಸ್ತಾಂತರಿಸುವ ಉದ್ದೇಶ ಸರ್ಕಾರಕ್ಕಿದೆಯೆ? | ಇರುವುದಿಲ್ಲ |
| ಆ. | ಹಾಗಿದ್ದಲ್ಲಿ, ಜಿಲ್ಲಾ ಪಂಚಾಯಿತಿಯ ಕೆರೆಗಳ ಸಂಖ್ಯೆ ಎಷ್ಟು? | ಜಿಲ್ಲಾ ಪಂಚಾಯಿತಿ ವ್ಯಾಪ್ತಿಯಲ್ಲಿ 16589, ತಾಲ್ಲೂಕು ಪಂಚಾಯಿತಿ ವ್ಯಾಪ್ತಿಯಲ್ಲಿ 2319 ಹಾಗೂ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ 14196 ಒಟ್ಟು 33099 ಕೆರೆಗಳು ಇರುತ್ತವೆ. ವಿವರ ಅನುಬಂಧದಲ್ಲಿ ನೀಡಿದೆ. |
| ಇ | ಅನುದಾನದ ಕೊರತೆಯಿಂದ ಜಿಲ್ಲಾ ಪಂಚಾಯಿತಿಯ ಕೆರೆಗಳು ಅಭಿವೃದ್ಧಿ ಕಾಣದೆ ಎಲ್ಲಾ ಕೆರೆಗಳು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ? | ಬಂದಿರುವುದಿಲ್ಲ |

ಕಡತ ಸಂಖ್ಯೆ: ಗ್ರಾಅಪ:01:ಆರ್‌ಆರ್‌ಸಿ:2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

## ಅನುಬಂಧ–1

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕೆರೆಗಳ ಮಾಹಿತಿ

| ಕ್ರಸಂ | ಜಿಲ್ಲೆ | ವಿಭಾಗ | ಜಿಲ್ಲಾ ಪಂಚಾಯಿತಿ ಕೆರೆಗಳು | ತಾಲ್ಲೂಕು ಪಂಚಾಯಿತಿ ಕೆರೆಗಳು | ಗ್ರಾಮ ಪಂಚಾಯಿತಿ ಕೆರೆಗಳು | ಒಟ್ಟಾರೆಯಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕೆರೆಗಳು |
|---|---|---|---|---|---|---|
| 1 | ಬಾಗಲಕೋಟೆ | ಬಾಗಲಕೋಟೆ | 148 | 0 | 7 | **155** |
| 2 | ಬೆಂಗಳೂರು ನಗರ | ಬೆಂಗಳೂರು ನಗರ | 276 | 0 | 145 | **421** |
| 3 | ಬೆಂಗಳೂರು(ಗ್ರಾ) | ಬೆಂಗಳೂರು(ಗ್ರಾ) | 399 | 0 | 150 | **549** |
| 4 | ಬೆಳಗಾವಿ | ಬೆಳಗಾವಿ | 363 | 0 | 326 | **689** |
| 5 | | ಚಿಕ್ಕೋಡಿ | 57 | 0 | 114 | **171** |
| 6 | ಬಳ್ಳಾರಿ | ಬಳ್ಳಾರಿ | 34 | 0 | 108 | **142** |
| 7 | | ಹಢಗಲಿ | 79 | 0 | 151 | **230** |
| 8 | ಬೀದರ್ | ಬೀದರ್ | 107 | 0 | 0 | **107** |
| 9 | ಚಾಮರಾಜನಗರ | ಚಾಮರಾಜನಗರ | 89 | 0 | 903 | **992** |
| 10 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | 1420 | 0 | 0 | **1420** |
| 11 | ಚಿಕ್ಕಮಗಳೂರು | ಚಿಕ್ಕಮಗಳೂರು | 1766 | 0 | 0 | **1766** |
| 12 | ಚಿತ್ರದುರ್ಗ | ಚಿತ್ರದುರ್ಗ | 136 | 125 | 400 | **661** |
| 13 | ದಕ್ಷಿಣ ಕನ್ನಡ | ದಕ್ಷಿಣ ಕನ್ನಡ | 144 | 0 | 253 | **397** |
| 14 | ದಾವಣಗೆರೆ | ದಾವಣಗೆರೆ | 243 | 0 | 155 | **398** |
| 15 | ಧಾರವಾಡ | ಧಾರವಾಡ | 421 | 292 | 193 | **906** |
| 16 | ಗದಗ | ಗದಗ | 213 | 0 | 15 | **228** |
| 17 | ಹಾಸನ | ಹಾಸನ | 2735 | 509 | 2459 | **5703** |
| 18 | | ಚನ್ನರಯಪಟ್ಟಣ | 377 | 391 | 300 | **1068** |
| 19 | ಹಾವೇರಿ | ಹಾವೇರಿ | 1563 | 0 | 59 | **1622** |
| 20 | ಕಲಬುರಗಿ | ಕಲಬುರಗಿ | 33 | 0 | 0 | **33** |
| 21 | ಕೊಡಗು | ಕೊಡಗು | 680 | 0 | 0 | **680** |
| 22 | ಕೋಲಾರ | ಕೋಲಾರ | 716 | 456 | 1257 | **2429** |
| 23 | ಕೊಪ್ಪಳ | ಕೊಪ್ಪಳ | 22 | 0 | 0 | **22** |
| 24 | ಮಂಡ್ಯ | ಮಂಡ್ಯ | 580 | 0 | 769 | **1349** |
| 25 | ಮೈಸೂರು | ಮೈಸೂರು | 187 | 0 | 86 | **273** |
| 26 | | ಕೆ.ಆರ್.ನಗರ | 417 | 0 | 109 | **526** |
| 27 | ರಾಯಚೂರು | ರಾಯಚೂರು | 221 | 0 | 0 | **221** |
| 28 | ರಾಮನಗರ | ರಾಮನಗರ | 393 | 0 | 1092 | **1485** |
| 29 | ಶಿವಮೊಗ್ಗ | ಶಿವಮೊಗ್ಗ | 188 | 541 | 1072 | **1801** |
| 30 | | ಸಾಗರ | 0 | 0 | 2957 | **2957** |
| 31 | ತುಮಕೂರು | ತುಮಕೂರು | 438 | 0 | 0 | **438** |
| 32 | | ಮಧುಗಿರಿ | 573 | 0 | 0 | **573** |
| 33 | ಉಡುಪಿ | ಉಡುಪಿ | 0 | 0 | 412 | **412** |
| 34 | ಕಾರವಾರ | ಕಾರವಾರ | 368 | 0 | 405 | **773** |
| 35 | | ಶಿರಸಿ | 813 | 0 | 299 | **1112** |
| 36 | ವಿಜಯಪುರ | ವಿಜಯಪುರ | 110 | 0 | 0 | **110** |
| 37 | ಯಾದಗಿರಿ | ಯಾದಗಿರಿ | 280 | 0 | 0 | **280** |
| | | ಒಟ್ಟಾರೆ | **16589** | **2314** | **14196** | **33099** |

ಸಾಮಾನ್ಯವಾಗಿ 1.1.2013ಕ್ಕೆ ಮೊದಲು ಹತ್ತು ವರ್ಷಗಳಿಗಿಂತ ಕಡಿಮೆಯಿರದ ಅವಧಿವರೆಗೆ ಸ್ಥಳೀಯ ಪ್ರದೇಶದಲ್ಲಿ ವಾಸವಾಗಿದ್ದರೆ, ಮತ್ತು ಅವರ ಹೆಸರು ಮತದಾರರ ಪಟ್ಟಿಯಲ್ಲಾಗಲಿ ಅಥವಾ ಪಡಿತರ ಚೀಟಿಯಲ್ಲಾಗಲಿ ಇದ್ದರೆ; ಅಥವಾ ಸ್ಥಳೀಯ ಪ್ರದೇಶದಲ್ಲಿ 1.1.2013 ರಂದು ಅಥವಾ ಮೊದಲು ಯಾವುದೇ ಸ್ಥಿರಾಸ್ತಿಯನ್ನು ಹೊಂದಿದ್ದರೆ; ಅಥವಾ

(ಬಿ) ಪ್ರವೇಶಾತಿಗಾಗಿ ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯನ್ನು ಗೊತ್ತುಪಡಿಸಲಾಗಿದ್ದ ಸಂದರ್ಭಗಳಲ್ಲಿ,-

(i) ಯಾವ ಶೈಕ್ಷಣಿಕ ವರ್ಷದಲ್ಲಿ ಅವನು ಹಾಜರಾಗಿದ್ದನೋ ಅಥವಾ ಸಂದರ್ಭಾನುಸಾರ ಸಂಬಂಧಪಟ್ಟ ಅರ್ಹತಾ ಪರೀಕ್ಷೆಗೆ ಮೊದಲು ಹಾಜರಾಗಿದ್ದನೋ ಆ ಶೈಕ್ಷಣಿಕ ವರ್ಷಕ್ಕೆ ಮುಕ್ತಾಯವಾಗುವ ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳಿಗಿಂತ ಕಡಿಮೆಯಿರದ ಅವಧಿಯವರೆಗೆ ಅಂಥ ಸ್ಥಳೀಯ ಪ್ರದೇಶದಲ್ಲಿರುವ ಶೈಕ್ಷಣಿಕ ಸಂಸ್ಥೆ ಅಥವಾ ಶೈಕ್ಷಣಿಕ ಸಂಸ್ಥೆಗಳಲ್ಲಿ ಅವನು ಅಧ್ಯಯನ ಮಾಡಿರಬೇಕು; ಅಥವಾ

(ii) ಅವನು ಯಾವ ಶೈಕ್ಷಣಿಕ ವರ್ಷದಲ್ಲಿ ಹಾಜರಾಗಿದ್ದನೋ ಅಥವಾ ಸಂದರ್ಭಾನುಸಾರ ಸಂಬಂಧಪಟ್ಟ ಅರ್ಹತಾ ಪರೀಕ್ಷೆಗೆ ಮೊದಲು ಹಾಜರಾಗಿದ್ದನೋ ಆ ಶೈಕ್ಷಣಿಕ ವರ್ಷಕ್ಕೆ ಮುಕ್ತಾಯವಾಗುವ ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳ ಇಡೀ ಅಥವಾ ಯಾವುದೇ ಭಾಗದ ಅವಧಿಯಲ್ಲಿ ಅವನು ಶೈಕ್ಷಣಿಕ ಸಂಸ್ಥೆಯಲ್ಲಿ ಅಧ್ಯಯನ ಮಾಡದಿದ್ದರೆ ಅವನು ಯಾವ ಅರ್ಹತಾ ಪರೀಕ್ಷೆಗೆ ಹಾಜರಾಗಿದ್ದನೋ ಅಥವಾ ಸಂದರ್ಭಾನುಸಾರ ಮೊದಲು ಹಾಜರಾಗಿದ್ದನೋ ಆ ಅರ್ಹತಾ ಪರೀಕ್ಷೆಯು ಪ್ರಾರಂಭವಾದ ದಿನಾಂಕದಿಂದ ನಿಕಟಪೂರ್ವದ ಹತ್ತು ವರ್ಷಗಳಿಗಿಂತ ಕಡಿಮೆಯಿರದ ಅವಧಿವರೆಗೆ ಆ ಸ್ಥಳೀಯ ಪ್ರದೇಶದಲ್ಲಿ ಅವನು ವಾಸವಾಗಿರಬೇಕು; ಅಥವಾ

(iii) ಅವನ ತಂದೆ ತಾಯಿಗಳಲ್ಲಿ ಯಾರೊಬ್ಬರು ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳ ಅವಧಿಗಾಗಿ ಅಂಥ ಸ್ಥಳೀಯ ಪ್ರದೇಶದಲ್ಲಿನ ಶೈಕ್ಷಣಿಕ ಸಂಸ್ಥೆಯಲ್ಲಿ ಅಧ್ಯಯನ ಮಾಡಿರಬೇಕು.

(ಸಿ) ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯನ್ನು, ಪ್ರವೇಶಾತಿಗೆ ಗೊತ್ತುಪಡಿಸದಿದ್ದ ಸಂದರ್ಭದಲ್ಲಿ, ಅವನ ಅಥವಾ ಅವನ ತಂದೆ ತಾಯಿಗಳಲ್ಲಿ ಯಾರೊಬ್ಬರು ಯಾವ ದಿನಾಂಕಕ್ಕೆ ಆ ಸ್ಥಾನವನ್ನು ಪ್ರವೇಶಾತಿಗೆ ಅಧಿಸೂಚಿಸಲಾಗಿದೆಯೋ ಆ ದಿನಾಂಕದ ನಿಕಟ ಪೂರ್ವದ ಹತ್ತು ವರ್ಷಗಳಿಗಿಂತ ಕಡಿಮೆಯಿರದ ಅವಧಿವರೆಗೆ ಆ ಸ್ಥಳೀಯ ಪ್ರದೇಶದಲ್ಲಿ ವಾಸವಾಗಿರಬೇಕು; ಮತ್ತು

(ಡಿ) ಮಹಿಳೆಯ ಸಂದರ್ಭದಲ್ಲಿ, ಮೇಲಿನ (ಎ) ಯಿಂದ (ಸಿ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಲಾದ ಸ್ಥಳೀಯ ವ್ಯಕ್ತಿಯನ್ನು ಆಕೆಯು ವಿವಾಹವಾಗಿದ್ದರೆ,

–ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಯೆಂದು ಭಾವಿಸತಕ್ಕದ್ದು.

**ವಿವರಣೆ.–** ಈ ಕಂಡಿಕೆಯ ಉದ್ದೇಶಗಳಿಗಾಗಿ.–

(i) "ಶೈಕ್ಷಣಿಕ ಸಂಸ್ಥೆ" ಎಂದರೆ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ವಿಶ್ವವಿದ್ಯಾಲಯ ಅಥವಾ ಯಾವುದೇ ಶೈಕ್ಷಣಿಕ ಸಂಸ್ಥೆ, ವಿಶ್ವವಿದ್ಯಾಲಯ ಅಥವಾ ಇತರ ಸಕ್ಷಮ ಪ್ರಾಧಿಕಾರ;

(ii) ಅಧ್ಯಯನದ ಯಾವುದೇ ಕೋರ್ಸಿನ ಪ್ರವೇಶಕ್ಕೆ ಸಂಬಂಧಿಸಿದಂತೆ "ಸಂಬಂಧಪಟ್ಟ ಅರ್ಹತಾ ಪರೀಕ್ಷೆ" ಎಂದರೆ, ಅಂಥ ಅಧ್ಯಯನದ ಕೋರ್ಸಿಗೆ ಪ್ರವೇಶ ಪಡೆಯಲು ಉತ್ತೀರ್ಣರಾಗಬೇಕಾದ ಕನಿಷ್ಠ ಶೈಕ್ಷಣಿಕ ಅರ್ಹತಾ ಪರೀಕ್ಷೆ.

(iii) ಅಭ್ಯರ್ಥಿ ಅಥವಾ ಆತನ ತಂದೆ–ತಾಯಿ, ಈ ಕೆಳಗಿನ ಅವಧಿಯಲ್ಲಿ ಅಧ್ಯಯನ ಮಾಡಿದ ಕ್ರಮಾನುಗತ ಶೈಕ್ಷಣಿಕ ವರ್ಷಗಳನ್ನು ಪರಿಗಣನೆಗೆ ತೆಗೆದುಕೊಂಡು,–

(ಎ) ಆತನು, ಯಾವುದೇ ಪರೀಕ್ಷೆಯಲ್ಲಿ ಉತ್ತೀರ್ಣನಾಗಲು ವಿಫಲನಾದ ಕಾರಣಗಳಿಂದಾಗಿ ಆತನ ಅಧ್ಯಯನಕ್ಕೆ ಅಡಚಣೆಯಾದ ಯಾವುದೇ ಅವಧಿ; ಮತ್ತು

(ಬಿ) ರಾಜ್ಯವ್ಯಾಪಿ ವಿಶ್ವವಿದ್ಯಾಲಯ ಅಥವಾ ರಾಜ್ಯವ್ಯಾಪಿ ಶೈಕ್ಷಣಿಕ ಸಂಸ್ಥೆಯಲ್ಲಿ ಅವನು ಅಧ್ಯಯನ ಮಾಡಿದ ಯಾವುದೇ ಅವಧಿಯನ್ನು ಪರಿಗಣಿಸದೆ ಇರತಕ್ಕದ್ದಲ್ಲ.

(iv) ಯಾವುದೇ ಕೋರ್ಸಿನ ಅಧ್ಯಯನದ ಪ್ರವೇಶಾತಿಗಾಗಿ ಯಾವೊಬ್ಬ ಅಭ್ಯರ್ಥಿಯು, ಸ್ಥಳೀಯ ಪ್ರದೇಶದಲ್ಲಿ ವಾಸವಿರುವನೇ ಎಂಬ ಪ್ರಶ್ನೆಯನ್ನು, ಅಭ್ಯರ್ಥಿ ಅಥವಾ ಆತನ ತಂದೆ–ತಾಯಿ ವಾಸ್ತವವಾಗಿ ವಾಸಿಸುತ್ತಿದ್ದ ಸ್ಥಳಗಳಿಗೆ ಸಂಬಂಧಿಸಿ, ನಿರ್ಧರಿಸತಕ್ಕದ್ದು.

**5. ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮ ಪ್ರಾಧಿಕಾರ.–** (1) ಸರ್ಕಾರವು, ಸ್ಥಳೀಯ ವ್ಯಕ್ತಿಗಳಿಗೆ ಅರ್ಹತಾ ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮ ಪ್ರಾಧಿಕಾರವನ್ನು ಅಧಿಸೂಚಿಸಬಹುದು. ಸಕ್ಷಮ ಪ್ರಾಧಿಕಾರವು ಯುಕ್ತ ವಿಚಾರಣೆಯನ್ನು ನಡೆಸಿದ ನಂತರ ಅರ್ಹತಾ ಪ್ರಮಾಣಪತ್ರಗಳನ್ನು ನೀಡಲು ನಿಯಮಿಸಬಹುದಾದಂಥ ರೀತಿಯಲ್ಲಿ ನೋಟೀಸನ್ನು ಪ್ರಕಟಿಸಬಹುದು.

(2) ಸಕ್ಷಮ ಪ್ರಾಧಿಕಾರದ ಆದೇಶದಿಂದ ಬಾಧಿತನಾದ ಯಾವುದೇ ವ್ಯಕ್ತಿಯು (ಸಾರ್ವಜನಿಕ ಸದಸ್ಯ ಅಥವಾ ಅಭ್ಯರ್ಥಿ) ಅಂಥ ಅರ್ಹತಾ ಪ್ರಮಾಣಪತ್ರವನ್ನು ನೀಡಿದ

ಮೂವತ್ತು ದಿನಗಳೊಳಗೆ ಜಿಲ್ಲಾಧಿಕಾರಿಗೆ ಅಥವಾ ಸರ್ಕಾರವು ಅಧಿಸೂಚಿಸಿದ ಯಾವುದೇ ಇತರ ಮೇಲ್ಮನವಿ ಪ್ರಾಧಿಕಾರಿಗೆ ಮೇಲ್ಮನವಿಯನ್ನು ಸಲ್ಲಿಸಬಹುದು.

(3) ಸಕ್ಷಮ ಪ್ರಾಧಿಕಾರ ಮತ್ತು ಮೇಲ್ಮನವಿ ಪ್ರಾಧಿಕಾರವು ಅವುಗಳನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಅರ್ಜಿ ಅಥವಾ ಮೇಲ್ಮನವಿಯನ್ನು ವಿಲೇ ಮಾಡತಕ್ಕದ್ದು.

(4) ಅಧಿವಾಸವನ್ನು ರುಜುವಾತುಪಡಿಸಲು ಅಗತ್ಯಪಡಿಸಲಾದ 'ಜನನ ಪ್ರಮಾಣ ಪತ್ರ' ವನ್ನು ರಾಜ್ಯ ಸರ್ಕಾರವು ಗೊತ್ತುಪಡಿಸಿದ ರೀತಿಯಲ್ಲಿ ನೀಡತಕ್ಕದ್ದು.

(5) ಸರ್ಕಾರವು, ಅಧಿವಾಸದ ರುಜುವಾತಿಗಾಗಿ ಸಿಂಧುತ್ವ ಪ್ರಮಾಣಪತ್ರವನ್ನು ನೀಡುವ ಪ್ರಕ್ರಿಯೆಯನ್ನು ರೂಪಿಸತಕ್ಕದ್ದು.

6. **ಪ್ರಾದೇಶಿಕ ವಿಶ್ವವಿದ್ಯಾಲಯಗಳು ಮತ್ತು ಶೈಕ್ಷಣಿಕ ಸಂಸ್ಥೆಗಳಲ್ಲಿ ಮೀಸಲಾತಿ.–** (1) ಸ್ಥಳೀಯ ಪ್ರದೇಶದಲ್ಲಿರುವ ಒಂದನೇ ಅನುಸೂಚಿಯಲ್ಲಿ ಉಲ್ಲೇಖಿಸಲಾದ ಯಾವುದೇ ಪ್ರಾದೇಶಿಕ ವಿಶ್ವವಿದ್ಯಾಲಯ ಅಥವಾ ಶೈಕ್ಷಣಿಕ ಸಂಸ್ಥೆಯಲ್ಲಿನ ಅಧ್ಯಯನದ ಪ್ರತಿಯೊಂದು ಕೋರ್ಸಿನಲ್ಲಿ ಲಭ್ಯವಿರುವ ಸ್ಥಾನಗಳ ಶೇಕಡಾ ಎಪ್ಪತ್ತರಷ್ಟು ಪ್ರವೇಶಾತಿಯನ್ನು, ಅಂಥ ವಿಶ್ವವಿದ್ಯಾಲಯ ಅಥವಾ ಶೈಕ್ಷಣಿಕ ಸಂಸ್ಥೆಗೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿರಿಸತಕ್ಕದ್ದು.

(2) (1)ನೇ ಉಪ–ಕಂಡಿಕೆಯ ಅಡಿಯಲ್ಲಿ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿರಿಸಬೇಕಾದ ಸ್ಥಾನಗಳ ಸಂಖ್ಯೆಯನ್ನು ನಿರ್ಧರಿಸುವಾಗ, ಸ್ಥಾನದ ಯಾವುದೇ ಅಪೂರ್ಣಾಂಕವನ್ನು ಒಂದು ಎಂದು ಲೆಕ್ಕಹಾಕತಕ್ಕದ್ದು:

ಪರಂತು, ಕನಿಷ್ಠ ಪಕ್ಷ ಒಂದು ಮೀಸಲು ಸ್ಥಾನವನ್ನು ಇಡತಕ್ಕದ್ದು.

7. **ರಾಜ್ಯವಾರು ವಿಶ್ವವಿದ್ಯಾಲಯಗಳು ಮತ್ತು ರಾಜ್ಯವಾರು ಶೈಕ್ಷಣಿಕ ಸಂಸ್ಥೆಗಳಲ್ಲಿ ಮೀಸಲಾತಿ.–** (1) ಎರಡನೇ ಅನುಸೂಚಿಯಲ್ಲಿ ಉಲ್ಲೇಖಿಸಲಾದ ರಾಜ್ಯ–ವಾರು ವಿಶ್ವವಿದ್ಯಾಲಯ ಅಥವಾ ರಾಜ್ಯವಾರು ಶೈಕ್ಷಣಿಕ ಸಂಸ್ಥೆಯಲ್ಲಿ ಕಲ್ಪಿಸಲಾದ ಪ್ರತಿಯೊಂದು ಅಧ್ಯಯನದ ವ್ಯಾಸಂಗ ಕ್ರಮದಲ್ಲಿ ಲಭ್ಯವಿರುವ ಸ್ಥಾನಗಳಲ್ಲಿ ಶೇಕಡಾ ಎಂಟರಷ್ಟನ್ನು ಹೈದ್ರಾಬಾದ್–ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಿಗೆ ಹಂಚಿಕೆ ಮಾಡುವುದು.

(2) (1)ನೇ ಉಪ ಕಂಡಿಕೆಯ ಅಡಿಯಲ್ಲಿ, ಸ್ಥಳೀಯ ವ್ಯಕ್ತಿಗಳ ಪರವಾಗಿ ಮೀಸಲಿರಿಸಬೇಕಾದ ಸ್ಥಾನಗಳ ಸಂಖ್ಯೆಯನ್ನು ನಿರ್ಧರಿಸುವಾಗ, ಸ್ಥಾನಗಳ ಯಾವುದೇ ಅಪೂರ್ಣಾಂಕವನ್ನು ಒಂದು ಎಂದು ಲೆಕ್ಕಹಾಕತಕ್ಕದ್ದು:

ಪರಂತು, ಕನಿಷ್ಠ ಪಕ್ಷ ಒಂದು ಸ್ಥಾನವನ್ನು ಮೀಸಲಿರಿಸದೆ ಇರತಕ್ಕದ್ದು.

(3) (1)ನೇ ಉಪಕಂಡಿಕೆಯ ಅಡಿಯಲ್ಲಿ, ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಗಳಿಗೆ ಸೇರಿದ ಮೀಸಲು ಸ್ಥಾನಗಳನ್ನು ಹಂಚಿಕೆ ಮಾಡುವಾಗ, ಸ್ಥಾನದ ಅಪೂರ್ಣಾಂಕಗಳನ್ನು ಒಂದು ಎಂದು ಲೆಕ್ಕ ಹಾಕುವ ಮೂಲಕ ಹೆಚ್ಚಿನ ಅಪೂರ್ಣಾಂಕವನ್ನು

ಸರಿಹೊಂದಿಸತಕ್ಕದ್ದು ಮತ್ತು, ಅಗತ್ಯವಿದ್ದರೆ, ಉಳಿದಿರುವ ಹೆಚ್ಚಿನ ಅಪೂರ್ಣಾಂಕಗಳನ್ನು ಸಹ ಮತ್ತೊಂದಕ್ಕೆ ಎಂದು ಸರಿ ಹೊಂದಿಸತಕ್ಕದ್ದು; ಮತ್ತು ಹಾಗೆ ಲೆಕ್ಕ ಹಾಕಬೇಕಾದ ಅಪೂರ್ಣಾಂಕವನ್ನು, ಸಮಾನವಾಗಿರುವ ಅಪೂರ್ಣಾಂಕಗಳ ಕಾರಣದಿಂದ ಆಯ್ಕೆ ಮಾಡಲು ಸಾಧ್ಯವಾಗದಿದ್ದಲ್ಲಿ, ಆಯ್ಕೆಯನ್ನು ಚೀಟಿ ಎತ್ತುವ ಮೂಲಕ ಆರಿಸತಕ್ಕದ್ದು:

ಪರಂತು, ಸ್ಥಳೀಯ ಪ್ರದೇಶದ ಸಂಬಂದದಲ್ಲಿ ಸ್ಥಳೀಯ ವ್ಯಕ್ತಿಗಳಿಗಾಗಿ ಕನಿಷ್ಠ ಒಂದು ಸ್ಥಾನ ಹಂಚಿಕೆ ಇರತಕ್ಕದ್ದು.

**8. ಮೀಸಲು ಖಾಲಿ ಸ್ಥಾನಗಳನ್ನು ತುಂಬುವುದು.–** ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿಡಲಾದ ಅಥವಾ ಹಂಚಿಕೆ ಮಾಡಲಾದ ಯಾವುದೇ ಸ್ಥಾನಗಳನ್ನು ತುಂಬಲು ಸ್ಥಳೀಯ ಅಭ್ಯರ್ಥಿ ಲಭ್ಯವಾಗದಿದ್ದರೆ, ಅಂಥ ಸ್ಥಾನವನ್ನು ಅದನ್ನು ಮೀಸಲಿಡಲಾಗದಿದ್ದರೆ ಹೇಗೋ ಹಾಗೆ ಭರ್ತಿ ಮಾಡತಕ್ಕದ್ದು.

**9. ನಿರ್ದೇಶನಗಳನ್ನು ನೀಡಲು ಪ್ರಾಧಿಕೃತಗೊಳಿಸಲು ಅಧಿಕಾರ.–** (1) ರಾಜ್ಯಪಾಲರು, ಯಾವುದೇ ವಿಶ್ವವಿದ್ಯಾಲಯ ಅಥವಾ ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟ ಯಾವುದೇ ಇತರ ಶೈಕ್ಷಣಿಕ ಸಂಸ್ಥೆ ಮತ್ತು ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಗೆ ಈ ಆದೇಶವನ್ನು ಜಾರಿಗೆ ತರುವ ಉದ್ದೇಶಕ್ಕಾಗಿ ಅಗತ್ಯವೆನಿಸಬಹುದಾದಂಥ ಅಥವಾ ಯುಕ್ತವೆನಿಸುವಂಥ ನಿರ್ದೇಶನಗಳನ್ನು ಹೊರಡಿಸಲು ರಾಜ್ಯ ಸರ್ಕಾರವನ್ನು ಅಗತ್ಯಪಡಿಸಬಹುದು.

(2) ರಾಜ್ಯ ಸರ್ಕಾರವು, (1)ನೇ ಉಪ–ಕಂಡಿಕೆಯ ಮೇರೆಗೆ ಯಾವುದೇ ನಿರ್ದೇಶನಗಳನ್ನು ಹೊರಡಿಸುವ ಉದ್ದೇಶಕ್ಕಾಗಿ ಅಥವಾ ಉಪ–ಕಂಡಿಕೆಯ ಮೇರೆಗೆ ಹೊರಡಿಸಲಾದ ತನ್ನ ನಿರ್ದೇಶನಗಳನ್ನು ಪಾಲಿಸಲಾಗುತ್ತಿದೆಯೆಂಬುದನ್ನು ತಾನು ಮನದಟ್ಟು ಮಾಡಿಕೊಳ್ಳಲು, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಮಾಹಿತಿ, ವರದಿ ಅಥವಾ ವಿವರಗಳನ್ನು ತಮಗೆ ಒದಗಿಸುವಂತೆ ವಿಶ್ವವಿದ್ಯಾಲಯ ಅಥವಾ ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗಳನ್ನು ಲಿಖಿತದಲ್ಲಿ ಆದೇಶದ ಮೂಲಕ ಅಗತ್ಯಪಡಿಸಬಹುದು ಮತ್ತು ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಯು ಅಂಥ ಆದೇಶವನ್ನು ಪಾಲಿಸತಕ್ಕದ್ದು.

**10. ಆದೇಶವು, ಅಧ್ಯಾರೋಹಿ ಪರಿಣಾಮ ಹೊಂದುವುದು.–** ಈ ಆದೇಶದ ಉಪಬಂಧವು, ಯಾವುದೇ ವಿಶ್ವವಿದ್ಯಾಲಯ ಅಥವಾ ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟ ಯಾವುದೇ ವಿಶ್ವವಿದ್ಯಾಲಯ ಅಥವಾ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗೆ ಪ್ರವೇಶಾತಿಗಳಿಗೆ ಸಂಬಂಧಿಸಿದ ಯಾವುದೇ ಶಾಸನ, ಅಧ್ಯಾದೇಶ, ನಿಯಮ, ವಿನಿಯಮ ಅಥವಾ ಇತರ ಆದೇಶದಲ್ಲಿ (ಈ ಆದೇಶದ ಪ್ರಾರಂಭಕ್ಕೆ ಮೊದಲು ಮಾಡಿರಲಿ ಅಥವಾ ನಂತರ ಮಾಡಿರಲಿ) ಏನೇ ಒಳಗೊಂಡಿದ್ದರೂ, ಅಧ್ಯಾರೋಹಿ ಪರಿಣಾಮವನ್ನು ಹೊಂದಿರತಕ್ಕದ್ದು.

**11. ಸಂದೇಹಗಳ ನಿವಾರಣೆ.–** ತೊಂದರೆಗಳನ್ನು ನಿವಾರಿಸಲು, ಈ ಆದೇಶದಲ್ಲಿರುವುದು ಯಾವುದೂ, ಅಂಥ ಉಪಬಂಧಗಳು ಈ ಆದೇಶಕ್ಕೆ

ಅಸಂಗತವಾಗದಿರುವಷ್ಟರಮಟ್ಟಿಗೆ ಮಹಿಳೆ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ನಾಗರಿಕ ವರ್ಗ, ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡದವರನ್ನು ಯಾವುದೇ ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಗಳಿಗೆ ಪ್ರವೇಶಾತಿ ಮಾಡಿಕೊಳ್ಳುವ ವಿಷಯದಲ್ಲಿನ ಮೀಸಲಾತಿಗೆ ಸಂಬಂಧಿಸಿದಂತೆ, ರಾಜ್ಯ ಸರ್ಕಾರ ಅಥವಾ ಇತರ ಸಕ್ಷಮ ಪ್ರಾಧಿಕಾರವು ಮಾಡಲಾದ ಯಾವುದೇ ಉಪಬಂಧಗಳ (ಈ ಆದೇಶದ ಪ್ರಾರಂಭಕ್ಕೆ ಮೊದಲು ಮಾಡಿರಲಿ ಅಥವಾ ನಂತರ ಮಾಡಿರಲಿ) ಕಾರ್ಯಾಚರಣೆಗೆ ಬಾಧಕವಾಗತಕ್ಕದ್ದಲ್ಲವೆಂದು, ಈ ಮೂಲಕ ಘೋಷಿಸಲಾಗಿದೆ.

**12. ಅನುಸೂಚಿಯನ್ನು ತಿದ್ದುಪಡಿ ಮಾಡುವ ಅಧಿಕಾರ.–** ರಾಜ್ಯಸರ್ಕಾರವು, ಅನುಸೂಚಿಗಳಲ್ಲಿರುವ ಯಾವುದೇ ವಿಷಯವನ್ನು ಸೇರಿಸುವ ಅಥವಾ ತೆಗೆದುಹಾಕುವ ಅಥವಾ ತಿದ್ದುಪಡಿ ಮಾಡುವ ಅಧಿಕಾರವನ್ನು ಹೊಂದಿರತಕ್ಕದ್ದು.

## ಒಂದನೇ ಅನುಸೂಚಿ

**[ಕಂಡಿಕೆ 1(2) ನೋಡಿ]**

(ಎ) ಸರ್ಕಾರದಿಂದ ಅಧಿಸೂಚಿತವಾದಂತೆ, ಖಾಸಗಿ ಅನುದಾನರಹಿತ ವಿಶ್ವವಿದ್ಯಾಲಯ, ಭಾವಿತ ವಿಶ್ವವಿದ್ಯಾಲಯಗಳು ಅಥವಾ ಶೈಕ್ಷಣಿಕ ಸಂಸ್ಥೆಗಳು ಒದಗಿಸುವ ಸ್ನಾತಕೋತ್ತರದವರೆಗಿನ ಮತ್ತು ಅದನ್ನು ಒಳಗೊಂಡ ಎಲ್ಲಾ ಕೋರ್ಸುಗಳು.

(ಬಿ) ಕಾರ್ಮಿಕ ಮಂತ್ರಾಲಯ ಅಥವಾ ಯಾವುದೇ ಇತರ ಇಲಾಖೆ ಅಥವಾ ಕೈಗಾರಿಕಾ ತರಬೇತಿ ಕೇಂದ್ರಗಳ ಮತ್ತು ಪಾಲಿಟೆಕ್ನಿಕ್‌ಗಳ ಮೂಲಕ ಅಥವಾ ಯಾವುದೇ ಖಾಸಗಿ (ಹಂಚಿಕೆಗಾಗಿ ಸರ್ಕಾರಕ್ಕೆ ನೀಡಲಾದ ಸೀಟುಗಳು) ಅಥವಾ ಅನುದಾನಿತ ಸಂಸ್ಥೆಗಳ ಮೂಲಕ ಒದಗಿಸಲಾಗುವ ವೃತ್ತಿ ತಾಂತ್ರಿಕ ಕೋರ್ಸುಗಳು.

(ಸಿ) ಆ ಪ್ರದೇಶದಲ್ಲಿನ ಎಲ್ಲಾ ಖಾಸಗಿ ಅನುದಾನರಹಿತ ವೈದ್ಯಕೀಯ ಕಾಲೇಜುಗಳು, ದಂತ ವೈದ್ಯಕೀಯ ಕಾಲೇಜುಗಳು, ಎಂಜಿನಿಯರಿಂಗ್ ಕಾಲೇಜುಗಳು ಅಥವಾ ಯಾವುದೇ ತಾಂತ್ರಿಕ, ವೃತ್ತಿಪರ, ವೃತ್ತಿ ಅಥವಾ ಉನ್ನತ ಶಿಕ್ಷಣ ಸಂಸ್ಥೆ.

## ಎರಡನೇ ಅನುಸೂಚಿ

**(ಕಂಡಿಕೆ 1(ಎಫ್)ಮತ್ತು(ಜಿ) ನೋಡಿ)**

### ಭಾಗ–I

### ರಾಜ್ಯ ವ್ಯಾಪಿ ವಿಶ್ವವಿದ್ಯಾಲಯಗಳು

ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಲಾದಂತೆ.

## ಭಾಗ–II

## ರಾಜ್ಯವಾರು ಶೈಕ್ಷಣಿಕ ಸಂಸ್ಥೆಗಳು

ಈ ಮುಂದಿನ ಕೋರ್ಸುಗಳನ್ನು ನೀಡುವ ಮತ್ತು ಈ ಅನುಸೂಚಿಯ ಭಾಗ–I ರಲ್ಲಿ ಉಲ್ಲೇಖಿಸಲಾದ ರಾಜ್ಯವಾರು ವಿಶ್ವವಿದ್ಯಾಲಯಗಳ ಮೂಲಕವಾಗಲಿ ಅಥವಾ ಮೊದಲನೇ ಅನುಸೂಚಿಯಲ್ಲಿ ಉಲ್ಲೇಖಿಸಲಾದ ರಾಜ್ಯವಾರೇತರ ವಿಶ್ವವಿದ್ಯಾಲಯದ ಮೂಲಕವಾಗಲಿ ಅಥವಾ ಪದವಿ ಪೂರ್ವ ಶಿಕ್ಷಣ ಮಂಡಲಿ ಅಥವಾ ರಾಷ್ಟ್ರೀಯ ವೃತ್ತಿಪರ ತರಬೇತಿ ಪರಿಷತ್ತಿನ (NCVT) ಪಠ್ಯಕ್ರಮದ ಪ್ರಕಾರ ಕೋರ್ಸುಗಳನ್ನು ನೀಡುತ್ತಿರುವ ಕೈಗಾರಿಕಾ ತರಬೇತಿ ಸಂಸ್ಥೆ ಮೂಲಕವಾಗಲಿ ಸಂಯೋಜಿತವಾದ ಖಾಸಗಿ (ಹಂಚಿಕೆಗಾಗಿ ಸರ್ಕಾರಕ್ಕೆ ನೀಡಲಾದ ಸೀಟುಗಳು) ಅಥವಾ ಸಾರ್ವಜನಿಕ ಸಂಸ್ಥೆಗಳು.

1. ಇಂಜಿನಿಯರಿಂಗ್
2. ದಂತ ವೈದ್ಯಕೀಯ
3. ವೈದ್ಯಕೀಯ
4. ಔಷಧಿ ವೈದ್ಯಕೀಯ
5. ಫಿಜಿಯೋ ತೆರಪಿ
6. ನರ್ಸಿಂಗ್
7. ದೈಹಿಕ ಶಿಕ್ಷಣ
8. ಮ್ಯಾನೇಜ್‌ಮೆಂಟ್ ಅಥವಾ ಸರ್ಕಾರವು ಅಧಿಸೂಚಿಸುವ ಯಾವುದೇ ಇತರ ಕೋರ್ಸುಗಳು
9. ರಾಜ್ಯದ ರಾಜಧಾನಿಯಾದ ಬೆಂಗಳೂರಿನ ಪ್ರದೇಶದಲ್ಲಿ ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತು ಅಥವಾ ಭಾರತದ ವೈದ್ಯಕೀಯ ಪರಿಷತ್ತು ಮಾನ್ಯತೆ ನೀಡಿದ ಯಾವುದೇ ಇತರ ವಿಷಯವನ್ನು ಕಾಲೇಜು ಅಥವಾ ಸಂಸ್ಥೆ ಅಥವಾ ಭಾವಿತ ವಿಶ್ವವಿದ್ಯಾಲಯ
10. ಕರ್ನಾಟಕದಲ್ಲಿ ಮತ್ತು ಸರ್ಕಾರವು ಅಧಿಸೂಚಿಸಿದ ಎಲ್ಲಾ ಸಂಸ್ಥೆಗಳು ಬೋಧಿಸದೇ ಇರುವ ಯಾವುದೇ ಇತರ ವಿಷಯ/ವೃತ್ತಿಪರ ಕೋರ್ಸು
11. ಕರ್ನಾಟಕದಲ್ಲಿ ಮತ್ತು ಸರ್ಕಾರವು ಅಧಿಸೂಚಿಸಿದ ಎಲ್ಲಾ ಕೈಗಾರಿಕಾ ತರಬೇತಿ ಸಂಸ್ಥೆಗಳು ಬೋಧಿಸದೇ ಇರುವ ಯಾವುದೇ ವಾಣಿಜ್ಯ

12. ಸರ್ಕಾರವು ಅಧಿಸೂಚಿಸಿದ ಯಾವುದೇ ಇತರ ಸಂಸ್ಥೆ ಅಥವಾ ಅಧ್ಯಯನ ವಿಭಾಗ ಅಥವಾ ಅವೆರಡು.

ಹೆಚ್.ಆರ್. ಭಾರದ್ವಾಜ್,
ಕರ್ನಾಟಕ ರಾಜ್ಯಪಾಲರು
ಕರ್ನಾಟಕದ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,

[signature] 17.01.2014

(ಕೆ.ಎಲ್.ಲೋಕನಾಥ)
ಸರ್ಕಾರದ ಜಂಟಿ ಕಾರ್ಯದರ್ಶಿ,
(ಹೈದ್ರಾಬಾದ್-ಕರ್ನಾಟಕ ವಿಶೇಷ ಕೋಶ)
ಸಿಅಸುಇ.

*ಇವರಿಗೆ:*

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ (2ನೇ ಘಟಕ), ಆರ್.ವಿ. ಕಾಲೇಜ್ ಪೋಸ್ಟ್, ಮೈಸೂರು ರಸ್ತೆ, ಬೆಂಗಳೂರು-560 059 – ಸದರಿ ಅಧಿಸೂಚನೆಯನ್ನು ತಕ್ಷಣವೇ ವಿಶೇಷ ರಾಜ್ಯ ಪತ್ರಿಕೆ VIAರಲ್ಲಿ ಪ್ರಕಟಿಸಲು ಹಾಗೂ 2000 ಪ್ರತಿಗಳನ್ನು ಒದಗಿಸಲು.

*ಪ್ರತಿ:*

1. ಘನತೆವೆತ್ತ ರಾಷ್ಟ್ರಪತಿಗಳ ಕಾರ್ಯದರ್ಶಿಗಳು, ರಾಷ್ಟ್ರಪತಿ ಭವನ, ನವ ದೆಹಲಿ-110 001.
2. ಘನತೆವೆತ್ತ ರಾಜ್ಯಪಾಲರ ಕಾರ್ಯದರ್ಶಿಗಳು, ರಾಜಭವನ, ಬೆಂಗಳೂರು.
3. ಕಾರ್ಯದರ್ಶಿಗಳು, ಭಾರತ ಸರ್ಕಾರ, ಗೃಹ ಮಂತ್ರಾಲಯ, ಎನ್‌ಡಿಸಿಸಿ-2ನೇ ಕಟ್ಟಡ, ಜೈಸಿಂಹ ರಸ್ತೆ, ನವ ದೆಹಲಿ-110 001.
4. ಕಾರ್ಯದರ್ಶಿಗಳು, ಭಾರತ ಸರ್ಕಾರ, ಕಾನೂನು ಮತ್ತು ನ್ಯಾಯ ಇಲಾಖೆ, ನವ ದೆಹಲಿ-110 001.
5. ಮಾನ್ಯ ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿಗಳು.
6. ಮಾನ್ಯ ಅಧ್ಯಕ್ಷರು, ಸಚಿವ ಸಂಪುಟದ ಉಪ ಸಮಿತಿ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಆಪ್ತ ಕಾರ್ಯದರ್ಶಿ.
7. ಹೆಚ್ಚುವರಿ ಪ್ರತಿ / ಶಾಖಾ ರಕ್ಷಾ ಕಡತ.

# ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 37 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:16.03.2020

(26) ಉ-5
17/3/2020
5-20 Pm

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ **ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **566** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ **ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **566** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagowri

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 566
ಸದಸ್ಯರ ಹೆಸರು : ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)
ಉತ್ತರಿಸಬೇಕಾದ ದಿನಾಂಕ : 17-03-2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

****

| | ಪ್ರಶ್ನೆ | ಉತ್ತರ |
|---|---|---|
| ಅ) | ಖಾನಾಪುರ ತಾಲ್ಲೂಕಿನ ದಟ್ಟ ಅರಣ್ಯ ಪ್ರದೇಶದಲ್ಲಿ ವಿದ್ಯುತ್ ಸರಬರಾಜು ಮಾರ್ಗಗಳು ಪದೇ ಪದೇ ದುರಸ್ತಿಗೀಡಾಗುತ್ತಿರುವುದರಿಂದ ಸಮರ್ಪಕ ವಿದ್ಯುತ್ ಸರಬರಾಜು ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಖಾನಾಪೂರ ತಾಲ್ಲೂಕಿನ ಅರಣ್ಯ ಪ್ರದೇಶದಲ್ಲಿನ ಮಾರ್ಗಗಳಿಗೆ ಸಮರ್ಪಕ ವಾದ ವಿದ್ಯುತ್ ಸರಬರಾಜನ್ನು ಮಾಡಲಾಗುತ್ತಿದೆ.<br>ಕೆಲವು ಸಂದರ್ಭಗಳಲ್ಲಿ ಸದರಿ ಅರಣ್ಯ ಪ್ರದೇಶದಲ್ಲಿರುವ ವಿದ್ಯುತ್ ಸರಬರಾಜಿನ ಮಾರ್ಗಗಳ ಮೇಲೆ ಗಿಡ/ಮರಗಳು ಹಾಗೂ ಗಿಡ/ಮರಗಳ ರೆಂಬೆಗಳು ಮುರಿದು ಬೀಳುವುದರಿಂದ ವಿದ್ಯುತ್ ಸರಬರಾಜಿನಲ್ಲಿ ತಾತ್ಕಾಲಿಕ ಅಡಚಣೆ ಯುಂಟಾಗುತ್ತಿರುತ್ತದೆ. |
| ಆ) | ಈ ಅರಣ್ಯ ಪ್ರದೇಶದಲ್ಲಿ ತುರ್ತು ದುರಸ್ಥಿ ಮತ್ತು ಸಮರ್ಪಕ ಸರಬರಾಜಿಗಾಗಿ ಸರ್ಕಾರವು ಕೈಗೊಂಡ ಕ್ರಮಗಳೇನು; | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯು ಅರಣ್ಯ ಪ್ರದೇಶದಲ್ಲಿರುವ ವಿದ್ಯುತ್ ಸರಬರಾಜು ಮಾರ್ಗಗಳಲ್ಲಿ ಉಂಟಾಗಬಹುದಾದ ದುರಸ್ತಿಗಳಿಗೆ ಒಂದು ಹೆಚ್ಚುವರಿ 24 X 7 ವಾಹನ ಹಾಗೂ ಸದಾ ಕಾರ್ಯನಿರ್ವಹಿಸುವ ಸಿಬ್ಬಂದಿಯ ತಂಡವನ್ನು ರಚಿಸಿದ್ದು, ಸಮರ್ಪಕ ವಿದ್ಯುತ್‌ನ್ನು ಪೂರೈಸಲು ಎಲ್ಲಾ ರೀತಿಯ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>ಮಳೆಗಾಲ ಪ್ರಾರಂಭವಾಗುವ ಮೊದಲೇ ಹೆಚ್.ಟಿ/ಎಲ್.ಟಿ. ಮಾರ್ಗಗಳ ಮೇಲೆ ಬರುವ ಗಿಡ/ಮರಗಳ ರೆಂಬೆಗಳನ್ನು ಕತ್ತರಿಸಲಾಗುವುದು ಮತ್ತು ಶಿಥಿಲಾವಸ್ಥೆಯಲ್ಲಿರುವ ಕಂಬ ಮತ್ತು ತಂತಿಗಳನ್ನು ಗುರುತಿಸಿ ಹೊಸ ಕಂಬ ಮತ್ತು ತಂತಿಗಳನ್ನು ಅಳವಡಿಸಲಾಗುವುದು. |
| ಇ) | ಸದರಿ ಅರಣ್ಯ ಪ್ರದೇಶದಲ್ಲಿ ಭೂಗತ ವಿದ್ಯುತ್ ಮಾರ್ಗದಂತಹ ನೂತನ ತಂತ್ರಗಳನ್ನು ಅಳವಡಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | ಅರಣ್ಯ ಪ್ರದೇಶದಲ್ಲಿ ಭೂಗತ ಕೇಬಲ್ ಅಳವಡಿಸುವ ವೆಚ್ಚ ಅಧಿಕವಾಗಿದ್ದು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಹೆಚ್ಚಿನ ಆರ್ಥಿಕ ಹೊರೆಯಾಗುವುದರ ಜೊತೆಗೆ ಸದರಿ ಭೂಗತ ಕೇಬಲ್‌ನ್ನು ಅರಣ್ಯ ಪ್ರದೇಶದಲ್ಲಿ ಅಳವಡಿಸಲು ಅರಣ್ಯ ಇಲಾಖೆಯ ಅನುಮತಿ ಸಹ ಅವಶ್ಯವಾಗಿರುವುದರಿಂದ ಪ್ರಸ್ತುತ, ಭೂಗತ ಕೇಬಲ್ ಅಳವಡಿಸಲು ಕ್ರಮ ಕೈಗೊಂಡಿರುವುದಿಲ್ಲ. |

ಸಂಖ್ಯೆ: ಎನರ್ಜಿ 37 ಪಿಪಿಎಂ 2020

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

**ಸಂಖ್ಯೆ:** ಎನರ್ಜಿ 45 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:16.03.2020

67 US
17/3/2020
5:20 PM

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಗುತ್ತೇದಾರ್ ಸುಭಾಷ್ ರುಕ್ಮಯ್ಯ** (ಆಳಂದ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2031** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಗುತ್ತೇದಾರ್ ಸುಭಾಷ್ ರುಕ್ಮಯ್ಯ (ಆಳಂದ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2031** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagei

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2031
ಸದಸ್ಯರ ಹೆಸರು : ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ (ಆಳಂದ)
ಉತ್ತರಿಸಬೇಕಾದ ದಿನಾಂಕ : 17-03-2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

****

| | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯ ವ್ಯಾಪ್ತಿಯಲ್ಲಿ ರಾತ್ರಿ ವೇಳೆಯಲ್ಲಿ ರೈತರ ಹೊಲಗಳಿಗೆ 3 ಫೇಸ್ ವಿದ್ಯುತ್ ಸಂಪರ್ಕವನ್ನು ನಿಗದಿತ ಸಮಯದಲ್ಲಿ ಮಾತ್ರ ಕಲ್ಪಿಸುತ್ತಿದ್ದು, ಇದರಿಂದ ಹೊಲದಲ್ಲಿ ಮನೆ ನಿರ್ಮಿಸಿಕೊಂಡು ವಾಸವಿರುವ ರೈತರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗುಲ್ಬರ್ಗಾ ವಿದ್ಯುಚ್ಛಕ್ತಿ ಸರಬರಾಜು ಕಂಪನಿ ವ್ಯಾಪ್ತಿಯ ಕಲಬುರಗಿ ಜಿಲ್ಲೆಯ ರೈತರ ಪಂಪ್‌ಸೆಟ್‌ಗಳಿಗೆ ಸರ್ಕಾರದ ಆದೇಶದಂತೆ ಹಗಲಿನಲ್ಲಿಯೇ ನಿರಂತರವಾಗಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಪೂರೈಕೆ ಮಾಡಲಾಗುತ್ತಿದೆ. ಹೊಲಗಳಲ್ಲಿ ಮನೆಗಳನ್ನು ನಿರ್ಮಿಸಿಕೊಂಡು ವಾಸವಿರುವ ರೈತರ ವಾಸದ ಮನೆಗಳಿಗೆ ನೀರಾವರಿ ಪಂಪಸೆಟ್ ಜಾಲದಿಂದ 7 ಗಂಟೆಗಳ ಕಾಲ ವಿದ್ಯುತ್ ಪೂರೈಸಲಾಗುತ್ತಿದೆ.<br>ನಿರಂತರ ಜ್ಯೋತಿ ಯೋಜನೆಯ ಪ್ರಮುಖ ಉದ್ದೇಶವು ಗ್ರಾಮೀಣ ಪ್ರದೇಶದಲ್ಲಿರುವ ವಿದ್ಯುತ್ ಹೊರೆಯನ್ನು ಕೃಷಿ ಮತ್ತು ಕೃಷಿಯೇತರ ವಿದ್ಯುತ್ ಹೊರೆಯನ್ನಾಗಿ ಬೇರ್ಪಡಿಸುವ ಯೋಜನೆಯಾಗಿರುತ್ತದೆ. ಇದರಿಂದಾಗಿ ಗ್ರಾಮೀಣ ಪ್ರದೇಶದಲ್ಲಿರುವ ಕೃಷಿಯೇತರ ಸ್ಥಾವರಗಳಿಗೆ 24 ಗಂಟೆಗಳ ಕಾಲ ಗುಣಮಟ್ಟದ ನಿರಂತರ ವಿದ್ಯುತ್ತನ್ನು ಮತ್ತು ಸರಕಾರದ ಪ್ರಸ್ತುತ ಆದೇಶದಂತೆ ರೈತರ ನೀರಾವರಿ ಪಂಪಸೆಟ್‌ಗಳಿಗೆ 7 ಗಂಟೆಗಳ ಕಾಲ ಗುಣಮಟ್ಟದ 3 ಫೇಸ್ ವಿದ್ಯುತ್‌ನ್ನು ಪೂರೈಸಲಾಗುತ್ತಿದೆ.<br>ಒಂದು ವೇಳೆ ನಿರಂತರ ಜ್ಯೋತಿ ಫೀಡರ್ ಮುಖಾಂತರ ಹೊಲಗಳಲ್ಲಿ ಮನೆಗಳನ್ನು ನಿರ್ಮಿಸಿಕೊಂಡು ವಾಸವಿರುವ ರೈತರ ವಾಸದ ಮನೆಗಳಿಗೆ ವಿದ್ಯುತ್ ಸಂಪರ್ಕ ಒದಗಿಸಿದರೆ ಗ್ರಾಮೀಣ ಪ್ರದೇಶದಲ್ಲಿರುವ ವಿದ್ಯುತ್ ಹೊರೆಯನ್ನು ಕೃಷಿ ಮತ್ತು ಕೃಷಿಯೇತರ ವಿದ್ಯುತ್ ಹೊರೆಯನ್ನಾಗಿ ಬೇರ್ಪಡಿಸುವ ಈ ಯೋಜನೆಯ ಮೂಲ ಉದ್ದೇಶ ಸಫಲವಾಗುವುದಿಲ್ಲ. |
| ಆ) | ಬಂದಿದ್ದಲ್ಲಿ, ರೈತರ ಹಿತದೃಷ್ಟಿಯಿಂದ ಕಲಬುರಗಿ ಜಿಲ್ಲೆಯ ವ್ಯಾಪ್ತಿಯಲ್ಲಿ ರೈತರ ಹೊಲಗಳಿಗೆ ರಾತ್ರಿ ಸಮಯದಲ್ಲಿ 2 ಫೇಸ್ ವಿದ್ಯುತ್ ಸಂಪರ್ಕ ಕಲ್ಪಿಸಿ ರೈತರಿಗೆ ಅನುಕೂಲ ಮಾಡಿಕೊಡುವ ಉದ್ದೇಶ ಸರ್ಕಾರಕ್ಕಿದೆಯೇ (ಸಂಪೂರ್ಣ ವಿವರ ನೀಡುವುದು)? | ನೀರಾವರಿ ಪಂಪ್‌ಸೆಟ್ ಫೀಡರ್‌ಗಳ ಮೂಲಕ ರೈತರ ಕೃಷಿ ಪಂಪು ಸೆಟ್ಟುಗಳಿಗೆ ಹಗಲಿನಲ್ಲಿಯೇ ನಿರಂತರವಾಗಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡುತ್ತಿರುವುದರಿಂದ, ಹೊಲಗಳಲ್ಲಿ ಮನೆ ನಿರ್ಮಿಸಿಕೊಂಡು ವಾಸವಿರುವ ರೈತರ (ಪ್ರತ್ಯೇಕ) ವಾಸದ ಮನೆಗಳಿಗೆ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ರಾತ್ರಿ ವೇಳೆ ವಿದ್ಯುತ್ ಸರಬರಾಜು ಮಾಡುತ್ತಿರುವುದಿಲ್ಲ. |

ಸಂಖ್ಯೆ: ಎನರ್ಜಿ 45 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

**ಸಂಖ್ಯೆ:** ಎನರ್ಜಿ 58 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:16.03.2020

98 US
17/3/2020
5-20PM

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಮಸಾಲ ಜಯರಾಮ್** (ತುರುವೇಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2191** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಮಸಾಲ ಜಯರಾಮ್ (ತುರುವೇಕೆರೆ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2191** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagowri

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **2191**

ಸದಸ್ಯರ ಹೆಸರು : ಶ್ರೀ ಮಸಾಲ ಜಯರಾಮ್ (ತುರುವೇಕೆರೆ)

ಉತ್ತರಿಸಬೇಕಾದ ದಿನಾಂಕ : **17-03-2020**

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

****

| | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕು, ಕಸಬಾ ಹೋಬಳಿಯ ಹರಿದಾಸನಹಳ್ಳಿ ಹಾಗೂ ಮಾಯಸಂದ್ರ ಹೋಬಳಿಯ ಶೆಟ್ಟಿಗೊಂಡನಹಳ್ಳಿ ಗ್ರಾಮದಲ್ಲಿ ಹೊಸದಾಗಿ 110/11 ಕೆ.ವಿ. ವಿದ್ಯುತ್ ಉಪ ಸ್ಥಾವರ ಸ್ಥಾಪಿಸುವ ಪ್ರಸ್ತಾವನೆಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕು, ಕಸಬಾ ಹೋಬಳಿಯ ಹರಿದಾಸನಹಳ್ಳಿ ಗ್ರಾಮದಲ್ಲಿ 110/11 ಕೆ.ವಿ. ವಿದ್ಯುತ್ ಉಪಕೇಂದ್ರವನ್ನು ಸ್ಥಾಪಿಸುವ ಪ್ರಸ್ತಾವನೆಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ತಾಂತ್ರಿಕ ಸಮನ್ವಯ ಸಮಿತಿ ಸಭೆಯಲ್ಲಿ ಅನುಮಮೋದನೆಗೊಂಡಿರುತ್ತದೆ.<br>ವಿದ್ಯುತ್ ಉಪಕೇಂದ್ರದ ಸ್ಥಾಪನೆಗೆ ಸಂಬಂಧಿಸಿದಂತೆ ಸರ್ವೇ ನಂ.199 ರಲ್ಲಿ ಖಾಸಗಿ ಜಮೀನನ್ನು ಕಾಯ್ದಿರಿಸಲಾಗಿದ್ದು, ಸದರಿ ಜಮೀನಿಗೆ ಜಿಲ್ಲಾಧಿಕಾರಿಗಳು, ತುಮಕೂರು ರವರು 8 ಲಕ್ಷ ರೂ.ಗಳನ್ನು ನಿಗದಿಪಡಿಸಿರುತ್ತಾರೆ. ಮೊತ್ತವನ್ನು ಪಾವತಿಸಲು ಕವಿಪ್ರನಿನಿಯಿಂದ ಅನುಮೋದನೆ ನೀಡಲಾಗಿದ್ದು, ಜಮೀನನ್ನು ನೋಂದಾಯಿಸಿಕೊಳ್ಳಬೇಕಾಗಿರುತ್ತದೆ. ಹರಿದಾಸನಹಳ್ಳಿ ವಿದ್ಯುತ್ ಉಪಕೇಂದ್ರದ ಸ್ಥಾಪನೆಗೆ ಈ ಹಿಂದೆ ಗುರುತಿಸಲಾಗಿದ್ದ ಸರಕಾರಿ ಜಮೀನು ಗ್ರಾಮಠಾಣಾ ವ್ಯಾಪ್ತಿಯಲ್ಲಿದ್ದುದರಿಂದ ಗ್ರಾಮಸ್ಥರು ವಿರೋದ ವ್ಯಕ್ತಿಪಡಿಸಿದ್ದ ಹಿನ್ನಲೆಯಲ್ಲಿ ತಹಸೀಲ್ದಾರ್ ರವರು ಸರಕಾರಿ ಜಮೀನನ್ನು ಕೈಬಿಟ್ಟು ಖಾಸಗಿ ಜಮೀನನ್ನು ಗುರುತಿಸಿ ಖರೀದಿಸಲು ಸೂಚಿಸಿದ ಹಿನ್ನಲೆಯಲ್ಲಿ ವಿಳಂಬವಾಗಿರುತ್ತದೆ. |
| ಆ) | ಬಂದಿದ್ದಲ್ಲಿ, ಸದರಿ ಉದ್ದೇಶಕ್ಕಾಗಿ ಜಮೀನು ಕಾಯ್ದಿರಿಸಲಾಗಿದೆಯೇ; ಕಾಯ್ದಿರಿಸಿರುವ ಜಮೀನಿನ ವಿವರ ನೀಡುವುದು; ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ; ಈ ಪ್ರಸ್ತಾವನೆಯ ವಿಳಂಬಕ್ಕೆ ಕಾರಣವೇನು? | ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕು, ಕಸಬಾ ಹೋಬಳಿ ಶೆಟ್ಟಿಗೊಂಡನಹಳ್ಳಿ ಗ್ರಾಮದಲ್ಲಿ ವಿದ್ಯುತ್ ಉಪಕೇಂದ್ರ ಸ್ಥಾಪಿಸುವ ಪ್ರಸ್ತಾವನೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ತಾಂತ್ರಿಕ ಸಮನ್ವಯ ಸಮಿತಿಯ ಸಭೆಯಲ್ಲಿ ಅನುಮೋದನೆಗೊಂಡಿದ್ದು, ಸದರಿ ವಿದ್ಯುತ್ ಉಪಕೇಂದ್ರವನ್ನು ಸ್ಥಾಪಿಸಲು ಗುರುತಿಸಲಾಗಿದ್ದ ಸರಕಾರಿ ಜಮೀನಿನ ಮಂಜೂರಾತಿಗಾಗಿ ಕಂದಾಯ ಇಲಾಖೆ, ಬೆಂಗಳೂರು ಹಂತದಲ್ಲಿ ಪರಿಶೀಲಿಸಲಾಗುತ್ತದೆ. ಸದರಿ ಜಮೀನನ್ನು ಗುಂಡುತೋಪು ಎಂದು ಪರಿಗಣಿಸಿರುವ ಹಿನ್ನಲೆಯಲ್ಲಿ ಗುಂಡುತೋಪನ್ನು ತಗ್ಗಿಸುವುದರ ಬಗ್ಗೆ ಪರಿಶೀಲನಾ ಹಂತದಲ್ಲಿ ಇದ್ದು, ಆದಷ್ಟು ಬೇಗನೆ ಕ್ರಮ ಜರುಗಿಸಲಾಗುತ್ತದೆ. |

ಸಂಖ್ಯೆ: ಎನರ್ಜಿ 58 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ಸರ್ಕಾರ

ಸಂಖ್ಯೆ:ಆಇ 29 ಇಎಲ್‌ಕ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ:16.03.2020

169
48
17/3/20

ಇಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರ್ಥಿಕ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2102ಕ್ಕೆ ಉತ್ತರ ಕಳುಹಿಸುವ ಕುರಿತು.

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2102ಕ್ಕೆ ಉತ್ತರವನ್ನು ತಯಾರಿಸಿ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

Manjula
16/3/2020

(ಮಂಜುಳಾ ನಟರಾಜ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ).

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 2102 |
| ಮಾನ್ಯ ಸದಸ್ಯರ ಹೆಸರು: | ಶ್ರೀ ಸುಬ್ಬಾರೆಡ್ಡಿ ಎಸ್. ಎನ್. (ಬಾಗೇಪಲ್ಲಿ) |
| ಉತ್ತರಿಸಬೇಕಾದವರು: | ಅಬಕಾರಿ ಸಚಿವರು |
| ಉತ್ತರಿಸಬೇಕಾದ ದಿನಾಂಕ: | 17-03-2020 |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಸಿಎಲ್-2, ಸಿಎಲ್-9, ಸಿಎಲ್-7 ಮದ್ಯ ಮಾರಾಟ ಸನ್ನದನ್ನು ಪ್ರತಿ ವರ್ಷ ನವೀಕರಣ ಮಾಡಬೇಕಾಗಿರುವುದು ನಿಜವೇ; | ಹೌದು. |
| (ಆ) | ಯಾವ ಕಾರಣಕ್ಕಾಗಿ ಸನ್ನದನ್ನು ಪ್ರತಿ ವರ್ಷ ನವೀಕರಣ ಮಾಡುವ ಕಾನೂನು ರೂಪಿಸಲಾಗಿದೆ; | ಮದ್ಯದ ಮಾರಾಟದ ವ್ಯಾಪಾರವು ನಾಗರಿಕ ಮೂಲಭೂತ ಹಕ್ಕು ಆಗಿಲ್ಲದಿರುವುದರಿಂದ ಮತ್ತು ಇದು ರಾಜ್ಯವು ನೀಡುವ ಸವಲತ್ತು (Privilege) ಆಗಿರುತ್ತದೆ. ಅಲ್ಲದೇ, ಇತರೆ ರಾಜ್ಯಗಳಲ್ಲಿಯೂ ಸಹಾ ಇದೇ ಪದ್ಧತಿ ಇರುವುದರಿಂದ ಸನ್ನದನ್ನು ಪ್ರತಿ ವರ್ಷ ನವೀಕರಣ ಮಾಡುವ ಕಾನೂನು ರೂಪಿಸಲಾಗಿರುತ್ತದೆ. |
| (ಇ) | ಪ್ರತಿ ವರ್ಷ ನವೀಕರಣದ ಬದಲು ನವೀಕರಣ ಶುಲ್ಕವನ್ನು ಪಡೆದು ಐದು ವರ್ಷಕ್ಕೊಮ್ಮೆ ನವೀಕರಣ ಮಾಡಲು ಕಾನೂನು ರೂಪಿಸಿದರೆ ಇಲಾಖೆಯ ಸಿಬ್ಬಂದಿಗಳಿಗೆ ಕೆಲಸದ ಹೊರೆ ಕಡಿಮೆಯಾಗುವುದಿಲ್ಲವೇ; | ನವೀಕರಣ ಪ್ರಕ್ರಿಯೆಯು ಆನ್‌ಲೈನ್ ಮುಖಾಂತರವೇ ಜರುಗುವ ಹಿನ್ನೆಲೆಯಲ್ಲಿ ಇಲಾಖೆಯ ಸಿಬ್ಬಂದಿಗಳಿಗೆ ಕೆಲಸದ ಹೊರೆಯಾಗುವುದಿಲ್ಲ. |
| (ಈ) | ಈ ನಿಟ್ಟಿನಲ್ಲಿ ಸರ್ಕಾರ ಕ್ರಮ ಕೈಗೊಳ್ಳುವುದೇ? | ಉದ್ಭವಿಸುವುದಿಲ್ಲ. |

(ಎಚ್. ನಾಗೇಶ್)
ಅಬಕಾರಿ ಸಚಿವರು

ಆಇ 29 ಇ.ಎಲ್.ಕ್ಯೂ 2020

# ಕರ್ನಾಟಕ ವಿಧಾನಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2030 |
| 2 | ಸದಸ್ಯರ ಹೆಸರು | : | ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ (ಆಳಂದ) |
| 3 | ಉತ್ತರಿಸುವ ದಿನಾಂಕ | : | 17-03-2020 |
| 4 | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪೊಲೀಸ್ ಇಲಾಖೆಯ ಸಿ ಮತ್ತು ಡಿ ವರ್ಗದ ನೌಕರರುಗಳು ವರ್ಗಾವಣೆ ಬಯಸಿದ್ದಲ್ಲಿ, 7 ವರ್ಷ ಸೇವೆ ಪೂರ್ಣಗೊಳಿಸಬೇಕೆಂಬ ಷರತ್ತು ನಿಗಧಿಪಡಿಸಿರುವುದರಿಂದ ನೌಕರರುಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರ ಗಮನಕ್ಕೆ ಬಂದಿದೆಯೇ; | 1) ಪೊಲೀಸ್ ಇಲಾಖೆಯಲ್ಲಿ 'ಸಿ' ಮತ್ತು 'ಡಿ' ವೃಂದದ ನೇಮಕಾತಿ ಪ್ರಾಧಿಕಾರಿಗಳಾಗಿ ವಲಯ ಐ.ಜಿ.ಪಿ ಮತ್ತು ಜಿಲ್ಲಾ ಎಸ್.ಪಿ ರವರುಗಳು ಕಾರ್ಯ ನಿರ್ವಹಿಸುತ್ತಿರುತ್ತಾರೆ.<br>2) ಕೆ.ಜಿ.ಎಸ್. (ಜೇಷ್ಟತೆ) ನಿಯಮ 1957ರನ್ವಯ ನೇಮಕಾತಿ ಪ್ರಾಧಿಕಾರಿಗಳೇ ಜೇಷ್ಟತೆಯನ್ನು ನಿರ್ವಹಿಸಬೇಕಾಗುತ್ತದೆ.<br>3) 'ಸಿ' ಮತ್ತು 'ಡಿ' ವರ್ಗದ ಸಿಬ್ಬಂದಿಯವರು ತಾವು ನೇಮಕವಾದ ಘಟಕದಿಂದ ಕೋರಿಕೆಯ ಮೇರೆಗೆ ವರ್ಗಾವಣೆ ಕೋರಿದಲ್ಲಿ ಜೇಷ್ಟತೆಯನ್ನು ಬಿಟ್ಟುಕೊಟ್ಟು ವರ್ಗಾವಣೆ ಹೋಗಬಹುದಾಗಿದೆ. ಇಂತಹ ಸಂದರ್ಭದಲ್ಲಿ ಕನಿಷ್ಠ ಕಾಲಾವಧಿಯನ್ನು ಆಡಳಿತಾತ್ಮಕ ದೃಷ್ಟಿಯಿಂದ 7 ವರ್ಷಗಳೆಂದು ನಿಗಧಿಪಡಿಸಲಾಗಿದೆ.<br>4) ಪತಿ-ಪತ್ನಿ ಪ್ರಕರಣ ಮತ್ತು ಧೀರ್ಘಾವಧಿ ಖಾಯಿಲೆಯಂತ ಸಂದರ್ಭಗಳಲ್ಲಿ ಕನಿಷ್ಠ 7 ವರ್ಷಗಳ ಅವಧಿಯಿಂದ ವಿನಾಯಿತಿ ನೀಡಲಾಗಿದೆ.<br><br>ವಲಯ/ಜಿಲ್ಲಾ ಮಟ್ಟದ ಸಾರ್ವಜನಿಕ ಹಿತ ದೃಷ್ಟಿಯ ವರ್ಗಾವಣೆಯನ್ನು ವರ್ಗಾವಣೆ ಮಾರ್ಗ ಸೂಚಿಯನ್ವಯ ಮಾಡಲಾಗುತ್ತದೆ. |
| ಆ) | ಬಂದಿದ್ದಲ್ಲಿ, ಈ ಷರತ್ತನ್ನು ಸಡಿಲಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮವೇನು; ಇದನ್ನು ಸಡಿಲ ಗೊಳಿಸಿ, ಸಿ ಮತ್ತು ಡಿ ವರ್ಗದ ನೌಕರರುಗಳಿಗೆ ಯಾವಾಗ ಅನುಕೂಲ ಕಲ್ಪಿಸಿಕೊಡಲಾಗುವುದು (ಸಂಪೂರ್ಣ ವಿವರ ನೀಡುವುದು)? | ಪ್ರಸ್ತುತ ಇಂತಹ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಸಂಖ್ಯೆ: ಒಇ 28 ಪಿಇಎಂ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಸಿಆಸುಇ 130 ಸಲುಸೇ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ: 16-03-2020.

**ಇವರಿಂದ:**

ಸರ್ಕಾರದ ಕಾರ್ಯದರ್ಶಿಗಳು,
ಸಿಬ್ಬಂದಿ & ಆಡಳಿತ ಸುಧಾರಣಾ ಇಲಾಖೆ,
ವಿಧಾನಸೌಧ, ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

132
17/3/20

**ಮಾನ್ಯರೆ,**

ವಿಷಯ: **ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರವಿಸುಬ್ರಹ್ಮಣ್ಯ ಎಲ್.ಎ, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2200 ಕ್ಕೆ ಉತ್ತರ ಒದಗಿಸುವ ಬಗ್ಗೆ.**

*****

ಪ್ರಸ್ತಾವಿತ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರವಿಸುಬ್ರಹ್ಮಣ್ಯ ಎಲ್.ಎ., ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2200 ಕ್ಕೆ ಉತ್ತರಗಳ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ನಿಮ್ಮ ನಂಬುಗೆಯ,

**(ಟಿ. ಮಹಂತೇಶ್)** 16/3/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ & ಆಡಳಿತ ಸುಧಾರಣಾ ಇಲಾಖೆ,
(ಸೇವೆಗಳು-6)

16.03.2020

ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆಸಂಖ್ಯೆ : | 2200 |
| ಸದಸ್ಯರ ಹೆಸರು : | ಶ್ರೀ ರವಿಸುಬ್ರಹ್ಮಣ್ಯ ಎಲ್.ಎ (ಬಸವನಗುಡಿ) |
| ಉತ್ತರಿಸುವ ದಿನಾಂಕ : | 17-03-2020 |
| ಉತ್ತರಿಸುವವರು : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಸೇವೆಗೆ ಸೇರಿದ ವಿಶೇಷ ಕಾರ್ಯದರ್ಶಿ ವೃಂದದಲ್ಲಿ ಎಷ್ಟು ಹುದ್ದೆಗಳಿವೆ; | ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಸರ್ಕಾರದ ವಿಶೇಷ ಕಾರ್ಯದರ್ಶಿ ವೃಂದದಲ್ಲಿ 06 ಹುದ್ದೆಗಳಿವೆ. |
| (ಆ) | ಸದರಿ ಹುದ್ದೆಗೆ ಮುಂಬಡ್ತಿ ನೀಡಲು ಅಪರ ಕಾರ್ಯದರ್ಶಿ ವೃಂದದಿಂದ ಪ್ರಸ್ತುತ ಅರ್ಹ ಅಧಿಕಾರಿಗಳಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿಶೇಷ ಕಾರ್ಯದರ್ಶಿ ಹುದ್ದೆಯ ಮುಂಬಡ್ತಿಗೆ ಸರ್ಕಾರದ ಅಪರ ಕಾರ್ಯದರ್ಶಿ ವೃಂದದಲ್ಲಿ ಅರ್ಹ ಅಧಿಕಾರಿಗಳು ಲಭ್ಯವಿರುತ್ತಾರೆ. |
| (ಇ) | ಸರ್ಕಾರದ ವಿಶೇಷ ಕಾರ್ಯದರ್ಶಿ ಹುದ್ದೆಯು ಸಚಿವಾಲಯದಲ್ಲಿನ ಸೇವೆಗೆ ಸೇರಿದವರಿಗೆ ಅಂತಿಮ ಹುದ್ದೆಯಾಗಿರುವುದರಿಂದ ಹಾಗೂ ಇಲಾಖಾ ಮುಖ್ಯಸ್ಥರ ಹುದ್ದೆಗೆ ಸಮಾನವಾದ ಹುದ್ದೆಯಾಗಿರುವುದರಿಂದ ಸದರಿ ಹುದ್ದೆಗೆ ಮುಂಬಡ್ತಿ ಮೂಲಕ ನೇಮಕ ಮಾಡುವ ಬದಲಾಗಿ ಆಯ್ಕೆ ಮೂಲಕ ನೇರ ನೇಮಕಾತಿ ಮಾಡುವುದು ಸೂಕ್ತವಲ್ಲವೇ; | ಸರ್ಕಾರದ ಕಾರ್ಯದರ್ಶಿ ಹಾಗೂ ವಿಶೇಷ ಕಾರ್ಯದರ್ಶಿ ವೃಂದಗಳು ಸಮಾನ ವೇತನ ಶ್ರೇಣಿ (ರೂ.104600-150600) ಹೊಂದಿದ ಹುದ್ದೆಗಳಾಗಿವೆ.<br><br>ಆದರೆ, ಸರ್ಕಾರದ ಬಹುತೇಕ ಇಲಾಖೆಗಳಲ್ಲಿ ಇಲಾಖಾ ಮುಖ್ಯಸ್ಥರ ಸ್ಥಾನಮಾನ ಹೊಂದಿರುವ ಹುದ್ದೆಗಳನ್ನು ಆಡಳಿತದ ಹಿತದೃಷ್ಟಿಯಿಂದ ಹಾಗೂ ಸೇವಾ ಅನುಭವವನ್ನು ಆದ್ಯತೆ ಮೇಲೆ ಪರಿಗಣಿಸಿ ಮುಂಬಡ್ತಿ ಮೂಲಕ ಮಾತ್ರ ಭರ್ತಿ ಮಾಡಲಾಗುತ್ತಿದೆ. ಆದಕಾರಣ ಸಚಿವಾಲಯದ (ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಇಲಾಖೆ ಹಾಗೂ ಕಾನೂನು ಇಲಾಖೆ ಹೊರತುಪಡಿಸಿ) ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಮುಂಬಡ್ತಿ ಮುಖಾಂತರ ಮಾತ್ರ ಭರ್ತಿ ಮಾಡುವುದು ಸೂಕ್ತವೆಂದು ಭಾವಿಸಿದೆ. |
| (ಈ) | ಸಚಿವಾಲಯದ ಸೇವಾನಿರತ ಉಪ ಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ ಹಾಗೂ ಅಪರ ಕಾರ್ಯದರ್ಶಿ ವೃಂದದ ಅಧಿಕಾರಿಗಳಿಗೆ ಒಂದು ಅರ್ಹತಾ ಪರೀಕ್ಷೆಯ ಆಧಾರದ ಮೇಲೆ ಆಯ್ಕೆ ಮೂಲಕ ನೇಮಕ ಮಾಡಿದಲ್ಲಿ ವಿಶೇಷ ಕಾರ್ಯದರ್ಶಿ ಹುದ್ದೆಗೆ ನೇಮಕವಾಗಲು ಅರ್ಹರಿಗೆ ಅವಕಾಶಮಾಡಿದಂತಾಗುವುದಿಲ್ಲವೇ; | ಸಚಿವಾಲಯ ನೇಮಕಾತಿ ನಿಯಮಗಳಂತೆ ಮಂಜೂರಾದ ಅಧಿಕಾರಿಗಳ ವೃಂದಬಲ ಈ ಕೆಳಕಂಡಂತಿದೆ.<br><br>1. ಸರ್ಕಾರದ ವಿಶೇಷ ಕಾರ್ಯದರ್ಶಿ - 06<br>2. ಸರ್ಕಾರದ ಅಪರ ಕಾರ್ಯದರ್ಶಿ - 07<br>3. ಸರ್ಕಾರದ ಜಂಟಿ ಕಾರ್ಯದರ್ಶಿ - 14<br>4. ಸರ್ಕಾರದ ಉಪ ಕಾರ್ಯದರ್ಶಿ - 80 |

| | | |
|---|---|---|
| | | ಮೇಲಿನಂತೆ ಸರ್ಕಾರದ ವಿಶೇಷ ಕಾರ್ಯದರ್ಶಿ ವೃಂದದಲ್ಲಿ ಕೇವಲ 06 ಹುದ್ದೆಗಳಿದ್ದು, ಅಪರ ಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ ಹಾಗೂ ಉಪ ಕಾರ್ಯದರ್ಶಿ ವೃಂದಗಳ ಒಟ್ಟು ಬಲ 101 ಇರುತ್ತದೆ. ಪರೀಕ್ಷೆ ಆಧಾರದಲ್ಲಿ ನೇಮಕ ಮಾಡಿದಲ್ಲಿ ಸೇವಾ ಅನುಭವ ಹಾಗೂ ಜೇಷ್ಠತೆಯನ್ನು ಕಡೆಗಣಿಸಿದಂತಾಗುತ್ತದೆ. ಆದಕಾರಣ, ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಮುಂಬಡ್ತಿಯಿಂದ ಮಾತ್ರ ಭರ್ತಿ ಮಾಡುವುದು ಸೂಕ್ತವೆಂದು ಭಾವಿಸಿದೆ. |
| (ಊ) | ಇಲಾಖಾ ಮುಖ್ಯಸ್ಥರ ಹುದ್ದೆಗೆ ಸಮಾನವಾದ ಸರ್ಕಾರದ ವಿಶೇಷ ಕಾರ್ಯದರ್ಶಿ ಹುದ್ದೆಗೆ ಲಿಖಿತ ಪರೀಕ್ಷೆ ನಡೆಸಿ ಅದರಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ನೇಮಕ ಮಾಡಲು ಸಚಿವಾಲಯದ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವುದು ಸೂಕ್ತವಲ್ಲವೇ? | ಸಚಿವಾಲಯವು ಸರ್ಕಾರದ ಕಾರ್ಯನೀತಿಯನ್ನು ರೂಪಿಸುವ ಸರ್ವೋನ್ನತ ಅಂಗವಾಗಿದ್ದು, ಸೇವಾ ಜೇಷ್ಠತೆ ಹಾಗೂ ಸೇವಾ ಅನುಭವವನ್ನು ಆದ್ಯತೆ ಮೇಲೆ ಪರಿಗಣಿಸಿ ಕಾರ್ಯದರ್ಶಿ/ವಿಶೇಷಕಾರ್ಯದರ್ಶಿ ಹುದ್ದೆಯನ್ನು (ಐ.ಎ.ಎಸ್. ಹೊರತುಪಡಿಸಿ) ಸಚಿವಾಲಯದ ಪೋಷಕ ವೃಂದದ ಅಧಿಕಾರಿಗಳ ಮುಂಬಡ್ತಿಯಿಂದ ಮಾತ್ರ ಭರ್ತಿ ಮಾಡುವುದು ಸೂಕ್ತವೆಂದು ಭಾವಿಸಿದೆ. |

ಸಂಖ್ಯೆ: ಸಿಆಸುಇ 130 ಸಉಸೇ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

**ಕರ್ನಾಟಕ ಸರ್ಕಾರ**

**ಸಂ:** ನಅಇ 74 ಪಿಆರ್‌ಜೆ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ
ಬೆಂಗಳೂರು, ದಿನಾಂಕ:-16-03-2020

131
L/S
17/3/20

**ಇಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ.
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೆ,**

**ವಿಷಯ:** ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ರವಿಸುಬ್ರಹ್ಮಣ್ಯ ಎಲ್.ಎ (ಬಸವನಗುಡಿ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2199 ಕ್ಕೆ ಉತ್ತರಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ರವಿಸುಬ್ರಹ್ಮಣ್ಯ ಎಲ್.ಎ (ಬಸವನಗುಡಿ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2199 ಉತ್ತರದ 50 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

ಲಲಿತಾಬಾಯಿ.ಕೆ

**( ಲಲಿತಾಬಾಯಿ. ಕೆ )**
ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪಿ.ಎಂ.ಸಿ),
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2199
2. ಸದಸ್ಯರ ಹೆಸರು : ಶ್ರೀ. ರವಿಸುಬ್ರಹ್ಮಣ್ಯ ಎಲ್.ಎ. (ಬಸವನಗುಡಿ)
3. ಉತ್ತರಿಸಬೇಕಾದ ದಿನಾಂಕ : 17-03-2020
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಮ್ಮ ಮೆಟ್ರೋ ಪ್ರಯಾಣಕ್ಕೆ ನಿಗದಿಪಡಿಸಿರುವ ದರವು ಬೇರೆ ರಾಜ್ಯದ ಮೆಟ್ರೋಗಳಿಗಿಂತ ಹೆಚ್ಚಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ನಮ್ಮ ಮೆಟ್ರೋ ಪ್ರಯಾಣ ದರ ಚೆನ್ನೈ, ಮುಂಬೈ, ಕೊಚ್ಚಿ ರಾಜ್ಯಗಳಿಗೆ ಹೋಲಿಸಿದರೆ ಕಡಿಮೆ ಇರುತ್ತದೆ. ಉದಾ:<br>1. ನಮ್ಮ ಮೆಟ್ರೋ 24 ಕಿ.ಮೀ.ಗಳಿಗೆ ದರ ರೂ. 60/-.<br>2. ಚೆನ್ನೈ ಮೆಟ್ರೋ 24 ಕಿ.ಮೀ.ಗಳಿಗೆ ರೂ. 70/-.<br>3. ಮುಂಬೈ ಮೆಟ್ರೋ 11 ಕಿ.ಮೀ.ಗಳಿಗೆ ರೂ. 40/-<br>4. ಕೊಚ್ಚಿ ಮೆಟ್ರೋ 22 ಕಿ.ಮೀ.ಗಳಿಗೆ ರೂ. 60/- |
| ಆ) | ಸಾಮಾನ್ಯ ಜನರು ಮೆಟ್ರೋದಲ್ಲಿ ಪ್ರಯಾಣಿಸಲು ಅನುಕೂಲವಾಗುವಂತೆ ದರವನ್ನು ಕಡಿಮೆ ಮಾಡಲು ಸರ್ಕಾರವು ಇಚ್ಛಿಸುವುದೇ; ಪರಿಷ್ಕೃತ ದರ ಜಾರಿಗೆ ತರಲಾಗುವುದೇ; | ಬೆಂಗಳೂರು ಮೆಟ್ರೋದಲ್ಲಿ ಸಾಮಾನ್ಯ ಜನರು ಸಹ ಪ್ರಯಾಣಿಸುತ್ತಿರುತ್ತಾರೆ. ದರಗಳು ಇತರ ಸಾಮಾನ್ಯ ಸಾರ್ವಜನಿಕ ಸಾರಿಗೆ ವಿಧಾನಗಳೊಂದಿಗೆ ಹೋಲಿಸಬಹುದಾದ ಕಾರಣ ಸಾಮಾನ್ಯ ಜನರು ನಮ್ಮ ಮೆಟ್ರೋವನ್ನು ಪೋಷಿಸಿದ್ದಾರೆ. ಬಿಎಂಆರ್‌ಸಿಎಲ್ ದಿನಕ್ಕೆ ಸುಮಾರು 4.3 ಲಕ್ಷ ಪ್ರಯಾಣಿಕರು ಪ್ರಯಾಣಿಸುತ್ತಿದ್ದಾರೆ ಮತ್ತು ಪ್ರತಿ ತಿಂಗಳು ಸ್ಥಿರವಾಗಿ ಹೆಚ್ಚುತ್ತಿದೆ. ಬಿಎಂಆರ್‌ಸಿಎಲ್ ನೆಟ್‌ವರ್ಕ್‌ನಲ್ಲಿ ಪ್ರತಿ ಕಿಲೋಮೀಟರ್ ಪ್ರಯಾಣದ ಶುಲ್ಕ ರೂ.2.75 ಮತ್ತು ಹವಾನಿಯಂತ್ರಿತ ಬೋಗಿಗಳಲ್ಲಿ ಸಾರ್ವಜನಿಕ ಪ್ರಯಾಣವು ವೇಗವಾಗಿ ಮತ್ತು ಸುರಕ್ಷಿತವಾಗಿರುತ್ತದೆ. ಈ ಶುಲ್ಕವು ಸಾರ್ವಜನಿಕರಿಗೆ ಕೈಗೆಟುಕುವಂತಿದೆ. ಆದ್ದರಿಂದ, ಶುಲ್ಕವನ್ನು ಪರಿಷ್ಕರಿಸುವ ಪ್ರಸ್ತಾಪವಿಲ್ಲ. |
| ಇ) | ನಮ್ಮ ಮೆಟ್ರೋ ಪ್ರಯಾಣ ದರ ಕಡಿತದಿಂದ ಅಥವಾ ಟ್ರಿಪ್ ಟಿಕೆಟ್ ಪುನರ್ ಆರಂಭಿಸುವುದರಿಂದ ಹೆಚ್ಚು ಸಾರ್ವಜನಿಕರು ಮೆಟ್ರೋದಲ್ಲಿ ಪ್ರಯಾಣಿಸಲು ಉತ್ತೇಜಿಸಿದಂತಾಗುವುದಿಲ್ಲವೇ; | ನಮ್ಮ ಮೆಟ್ರೋದಲ್ಲಿ ನಿಯಮಿತವಾಗಿ ಕಚೇರಿಗೆ ಹೋಗುವವರಿಗೆ ಕಾರ್ಡ್‌ಗಳ ಮೂಲಕ ಪ್ರಯಾಣವನ್ನು ಉತ್ತೇಜಿಸಲು ಟ್ರಿಪ್ ಟಿಕೆಟ್‌ಗಳನ್ನು ಆರಂಭದಲ್ಲಿ ಪರಿಚಯಿಸಲಾಯಿತು. ಈ ಟ್ರಿಪ್ ಟಿಕೆಟ್‌ಗಳು ನಿರ್ದಿಷ್ಟ ಅವಧಿಗೆ ಮಾನ್ಯವಾಗಿದ್ದವು ಮತ್ತು ಅವಧಿ ಮುಗಿದ ನಂತರ ಸಮಾನ ಪ್ರಮಾಣದ ಬಳಕೆಯಾಗದ ಮೊತ್ತ ರದ್ದಾಗುತ್ತಿತ್ತು ಇದರಿಂದ, ಪ್ರಯಾಣಿಕರಲ್ಲಿ ದೂರುಗಳು ಮತ್ತು ಅಸಮಾಧಾನಗಳು ಇದ್ದವು. ಆದ್ದರಿಂದ ಟ್ರಿಪ್ ಟಿಕೆಟ್‌ನ್ನು ಹಿಂಪಡೆಯಲಾಯಿತು ಹಾಗೂ ಟ್ರಿಪ್ ಟಿಕೆಟ್‌ಗಳನ್ನು ಮತ್ತೆ ಪರಿಚಯಿಸುವ ಪ್ರಸ್ತಾಪವಿರುವುದಿಲ್ಲ.<br>ಪ್ರಸ್ತುತ 65% ರೈಡರ್‌ಶಿಪ್‌ನ್ನು ಸ್ಮಾರ್ಟ್ ಕಾರ್ಡ್‌ಗಳೊಂದಿಗೆ ಸಂಗ್ರಹಿಸಿದ ಮೌಲ್ಯ ಟಿಕೆಟ್‌ಗಳನ್ನು ಬಳಸಿ ನಡೆಸಲಾಗುತ್ತಿದೆ. ಇದು ಅನುಕೂಲಕರ, ಸರಳ ಮತ್ತು ಜನಪ್ರಿಯವಾಗಿದೆ ಮತ್ತು 5% ರಿಯಾಯಿತಿಯನ್ನು ಹೊಂದಿದೆ. |

| | | |
|---|---|---|
| ಈ) | ಮೆಟ್ರೋ ಹಾಗೂ ಬಿಎಂಟಿಸಿ ಬಸ್ ಪ್ರಯಾಣ ಎರಡಕ್ಕೂ ಅನುಕೂಲವಾಗುವಂತೆ ಸಾಮಾನ್ಯ ಕಾರ್ಡ್‌ನ್ನು ಎಂದು ಜಾರಿಗೆ ತರಲಾಗುವುದು; | ಕಾಮನ್ ಮೊಬಿಲಿಟಿ ಕಾರ್ಡ್ ಮೂಲಕ ಶುಲ್ಕ ಸಂಗ್ರಹ ವ್ಯವಸ್ಥೆಯನ್ನು ಸ್ಥಾಪಿಸುವ ಗುತ್ತಿಗೆಯನ್ನು ಬಿಎಂಆರ್‌ಸಿಎಲ್ ನೀಡಿದೆ ಮತ್ತು ಮಾರ್ಚ್-2021 ರೊಳಗೆ ಇದು ಸಿದ್ಧವಾಗಲಿದೆ. ಬಿಎಂಟಿಸಿಯಿಂದ ಗುತ್ತಿಗೆ ಕರೆಯುವ ಪ್ರಕ್ರಿಯೆಯು ಪ್ರಗತಿಯಲ್ಲಿದೆ. |
| ಉ) | ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಬಿಎಂಟಿಸಿ ಬಸ್‌ನಂತೆ ಮೆಟ್ರೋದಲ್ಲಿ ಪ್ರಯಾಣಿಸಲು ವಿದ್ಯಾರ್ಥಿಗಳಿಗೆ ರಿಯಾಯಿತಿ ದರದಲ್ಲಿ ಪಾಸ್ ನೀಡುವುದು ಹಾಗೂ ಬಿಎಂಟಿಸಿ ಮೆಟ್ರೋ ಎರಡೂ ಸೇರಿ ಪ್ರಯಾಣಿಸಲು ಸಂಯುಕ್ತ ವಿದ್ಯಾರ್ಥಿ ಪಾಸ್ 2020-21ನೇ ಸಾಲಿನಲ್ಲಿ ನೀಡಲಾಗುವುದೇ; | ಬಿ.ಎಂ.ಆರ್.ಸಿ.ಎಲ್ ಈಗಾಗಲೇ ಸ್ಮಾರ್ಟ್ ಕಾರ್ಡ್‌ಗಳನ್ನು ಬಳಸುವ ಎಲ್ಲಾ ವರ್ಗದ ಪ್ರಯಾಣಿಕರಿಗೆ 5% ರಿಯಾಯಿತಿಯನ್ನು ನೀಡಲಾಗುತ್ತಿದೆ. ಅದೇ ರಿಯಾಯಿತಿಯನ್ನು ವಿದ್ಯಾರ್ಥಿಗಳೂ ಪಡೆಯಬಹುದಾಗಿದೆ. ಚಾಲ್ತಿಯಲ್ಲಿರುವ ಆರ್ಥಿಕ ಪರಿಸ್ಥಿತಿಯಲ್ಲಿ, ಬಿಎಂಆರ್‌ಸಿಎಲ್ ಮತ್ತಷ್ಟು ರಿಯಾಯಿತಿಯನ್ನು ನೀಡುವ ಪ್ರಸ್ತಾವನೆ ಇರುವುದಿಲ್ಲ. |

ಕಡತ ಸಂಖ್ಯೆ: ನಅಇ 74 ಪಿ.ಆರ್.ಜೆ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿಗಳು

ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 47 ಜಿಇಎಲ್ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 16/03/2020.

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**'ಜರೂರು'**

78
18
17/3/20

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ **ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2112**ಕ್ಕೆ** ಉತ್ತರ ಕಳುಹಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ **ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2112**ಕ್ಕೆ** ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

(ಎಸ್.ವೀಣಾ)
ಸರ್ಕಾರದ ಅಧೀನ ಕಾರ್ಯದರ್ಶಿ
(ಪೌರಾಡಳಿತ-2 & ಮಂಡಳಿ)
ನಗರಾಭಿವೃದ್ಧಿ ಇಲಾಖೆ.

<u>ಪ್ರತಿಯನ್ನು:</u>

1) ಮಾನ್ಯ ಪೌರಾಡಳಿತ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2) ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ (ಸಮನ್ವಯ).

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 2112 |
| ಸದಸ್ಯರ ಹೆಸರು: | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) |
| ಉತ್ತರಿಸಬೇಕಾದ ದಿನಾಂಕ: | 17.03.2020 |
| ಉತ್ತರಿಸುವವರು: | ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೈಲಹೊಂಗಲ ಪುರಸಭೆಯ ವ್ಯಾಪ್ತಿಯಲ್ಲಿ ಒಂದು ಕೆರೆಯಿರುವುದು. ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| (ಆ) | ಅದರಲ್ಲಿರುವ ನೀರು ಆಗಾಗ್ಗೆ ಕಲುಷಿತಗೊಳ್ಳುತ್ತಿರುವುದರಿಂದ ಸುತ್ತಮುತ್ತಲಿನ ಜನರ ಮತ್ತು ದನಕರುಗಳ ಆರೋಗ್ಯದ ಮೇಲೆ ಪರಿಣಾಮ ಬೀರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಬೈಲಹೊಂಗಲ ಪುರಸಭೆ ವ್ಯಾಪ್ತಿಯ ರಿ.ಸ.ನಂ. 299ರಲ್ಲಿ ಒಂದು ಕೆರೆ ಇರುತ್ತದೆ. ಸದರಿ ಕೆರೆಯನ್ನು ಪುರಸಭೆ ವತಿಯಿಂದ ನಿರ್ವಹಣೆ ಮಾಡಲಾಗುತ್ತಿದೆ. ಕೆರೆಯ ನೀರನ್ನು ನಿರಂತರವಾಗಿ ಕುಡಿಯಲು ಹಾಗೂ ಇನ್ನಿತರ ಬಳಕೆಗಾಗಿ ಬಳಸದೇ ಇರುವುದರಿಂದ ಅದರಲ್ಲಿ ಆಲ್ಗೆ(ಪಾಚಿ) ಬೆಳೆದು ಹಸಿರು ಆಗಿರುತ್ತದೆ. ಕೆರೆಯ ನೀರಿನಿಂದ ಸುತ್ತಮುತ್ತಲಿನ ಜನರಿಗೆ ಹಾಗೂ ದನಕರುಗಳ ಆರೋಗ್ಯದ ಮೇಲೆ ಹಾನಿಯಾಗಿರುವ ಬಗ್ಗೆ ಹಾಗೂ ಅದರಿಂದ ಪರಿಣಾಮವಾಗಿರುವ ಬಗ್ಗೆ ಯಾವುದೇ ಅಧಿಕೃತವಾದ ಮಾಹಿತಿ ಬಂದಿರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಆ ಕೆರೆಯನ್ನು ಸಂಪೂರ್ಣವಾಗಿ, ಅಭಿವೃದ್ಧಿ ಪಡಿಸಲು ಕ್ರಮ ಕೈಗೊಳ್ಳಲಾಗುವುದೇ? | ಈಗಾಗಲೇ ಕೆರೆ ಅಭಿವೃದ್ಧಿಗಾಗಿ ಅರಣ್ಯ, ಪರಿಸರ ಮತ್ತು ಜೀವಶಾಸ್ತ್ರ ಇಲಾಖೆಯ ಸರ್ಕಾರದ ಆದೇಶ ಸಂಖ್ಯೆ: ಅಪಜೀ/131/ಇಎನ್‌ವಿ/2012, ಬೆಂಗಳೂರು ದಿನಾಂಕ: 22/02/2013 ರನ್ವಯ ರೂ.100.00 ಲಕ್ಷಗಳಲ್ಲಿ ರೂ. 25.00 ಲಕ್ಷ ಪುರಸಭೆ ವಂತಿಕೆ (ಸಿಎಂಎಸ್‌ಎಂಟಿಡಿಪಿ) ಯೋಜನೆಯಡಿ ಕಾಯ್ದಿರಿಸಿಕೊಂಡು) ಹಾಗೂ ಕೆರೆ ಅಭಿವೃದ್ಧಿ ಪ್ರಾಧಿಕಾರದಿಂದ ರೂ. 75.00 ಲಕ್ಷಗಳನ್ನು ವಿನಿಯೋಗಿಸಿಕೊಂಡು, ಕಾಮಗಾರಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. ಈ ಕುರಿತು ವಿಸ್ತೃತ ಯೋಜನಾ ವರದಿಯು ತಯಾರಿಸುವ ಕಾರ್ಯವು ಪೌರಾಡಳಿತ ನಿರ್ದೇಶನಾಲಯದಲ್ಲಿ ಪರಿಶೀಲನಾ ಹಂತದಲ್ಲಿದೆ. |

ಸಂಖ್ಯೆ: ನಅಇ 47 ಜಿಇಎಲ್ 2020

(ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಆಇ 94 ವೆಚ್ಚ-8/2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಧಾನಸೌಧ
ಬೆಂಗಳೂರು, ದಿನಾಂಕ:16.03.2020

26
4/5
17/3/20

ಇಂದ,

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರ್ಥಿಕ ಇಲಾಖೆ, ವಿಧಾನಸೌಧ,
ಬೆಂಗಳೂರು-01.

ಇವರಿಗೆ,

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು-01.

ಮಾನ್ಯರೇ,

**ವಿಷಯ**: ಶ್ರೀ ಕುಮಾರಸ್ವಾಮಿ ಹೆಚ್.ಕೆ.(ಸಕಲೇಶಪುರ), ಮಾನ್ಯ ವಿಧಾನಸಭೆ ಸದಸ್ಯರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2157ಕ್ಕೆ ಸರ್ಕಾರದ ಉತ್ತರ ನೀಡುವ ಕುರಿತು.

ಉಲ್ಲೇಖ: ಅ.ಸ. ಪತ್ರ ಸಂಖ್ಯೆ:ವಿಸಪ್ರಶಾ/15ನೇವಿಸ/6ಅ/ಚುಗು–ಚುರ ಪ್ರಶ್ನೆ/09/2020, ದಿನಾಂಕ:06.03.2020

********

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ತಮ್ಮ ಅರೆ ಸರ್ಕಾರಿ ಪತ್ರದತ್ತ ಗಮನ ಸೆಳೆದು, ಶ್ರೀ ಕುಮಾರಸ್ವಾಮಿ ಹೆಚ್.ಕೆ.(ಸಕಲೇಶಪುರ), ಮಾನ್ಯ ವಿಧಾನಸಭೆ ಸದಸ್ಯರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2157ಕ್ಕೆ ಸರ್ಕಾರದ ಉತ್ತರದ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿದೆ.

16.03.2020
(ಕೆ.ಎನ್.ಮೂರ್ತಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ವೆಚ್ಚ–7&8)

# ಕರ್ನಾಟಕ ವಿಧಾನಸಭೆ

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 2157

2 ಸದಸ್ಯರ ಹೆಸರು ಶ್ರೀ. ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ)

3 ಉತ್ತರಿಸುವ ದಿನಾಂಕ 17-03-2020

4 ಉತ್ತರ ನೀಡುವವರು ಮಾನ್ಯ ಮುಖ್ಯಮಂತ್ರಿಗಳು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | 2019-20ನೇ ಸಾಲಿನಿಂದ ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಮತ್ತು ಪಾಲಿಟೆಕ್ನಿಕ್ ಕಾಲೇಜುಗಳಿಗೆ ವಿಭಾಗವಾರು ಬೋಧಕ/ಬೋಧಕೇತರ ಸಿಬ್ಬಂದಿ ವರ್ಗದವರನ್ನು ನೇಮಿಸಿಕೊಳ್ಳಲು ಆರ್ಥಿಕ ಇಲಾಖೆಯಿಂದ ಈವರೆಗೂ ಅನುಮೋದನೆ ನೀಡದಿರುವುದು ನಿಜವೇ; ಇದರಿಂದಾಗಿ ಬಡಕುಟುಂಬದಿಂದ ಬಂದಂತಹ ವಿದ್ಯಾರ್ಥಿಗಳ ತಾಂತ್ರಿಕ ವ್ಯಾಸಂಗಕ್ಕೆ ತೊಂದರೆಯಾಗಿರುವ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇತ್ತೀಚೆಗೆ ಎ.ಐ.ಸಿ.ಟಿ.ಇ.ಯು ಈ ಹಿಂದೆ ನಿಗದಿ ಪಡಿಸಲಾಗಿದ್ದ ಮಾನದಂಡವನ್ನು (Norms) ಪರಿಷ್ಕರಿಸಿದ್ದು, ಪಾಲಿಟೆಕ್ನಿಕ್ ಹಾಗೂ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕ್ರಮವಾಗಿ ಅಧ್ಯಾಪಕರು: ವಿದ್ಯಾರ್ಥಿಗಳ ಪ್ರಮಾಣ 1:20 ರಿಂಧ 1:25 ಮತ್ತು 1:15 ರಿಂದ 1:20 ಆಗಿರುತ್ತದೆ. ಅದರಂತೆ ಸಿಬ್ಬಂದಿ ಮಾದರಿಯನ್ನು ಪರಿಷ್ಕರಿಸಿ ಸಲ್ಲಿಸುವಂತೆ ಆಡಳಿತ ಇಲಾಖೆಗೆ ತಿಳಿಸಲಾಗಿದ್ದು, ಇಲಾಖೆಯಿಂದ ಮಾಹಿತಿ ಸ್ವೀಕೃತಿಯಾದ ನಂತರ 2019-20ನೇ ಸಾಲಿಗೆ ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಪಾಲಿಟೆಕ್ನಿಕ್/ಇಂಜಿನಿಯರಿಂಗ್ ಕಾಲೇಜುಗಳ ಹುದ್ದೆಗಳ ಸೃಜನೆಯ ಬಗ್ಗೆ ಪರಿಶೀಲಿಸಿ ಅನುದಾನದ ಲಭ್ಯತೆಯ ಆಧಾರದ ಮೇಲೆ ಭರ್ತಿ ಮಾಡಲು ಕ್ರಮವಹಿಸಲಾಗುವುದು.<br>ಮುಂದುವರೆದು, ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ನಿಯೋಜನೆ/ಹೊರಗುತ್ತಿಗೆ ಆಧಾರದ ಮೇಲೆ ಬೋಧಕ/ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಹಾಗೂ ಅರೆಕಾಲಿಕ ಉಪನ್ಯಾಸಕರನ್ನು ಸಹ ನೇಮಿಸಿಕೊಳ್ಳಲು ಆರ್ಥಿಕ ಇಲಾಖೆಯು ಅನುಮತಿ ನೀಡಿದೆ. |
| ಆ | ಹಾಗಿದ್ದಲ್ಲಿ, ಹೊಸದಾಗಿ ಪ್ರಾರಂಭವಾಗಿರುವ ಸದರಿ ಕಾಲೇಜುಗಳಿಗೆ ಸಿಬ್ಬಂದಿ ನೇಮಕದ ಬಗ್ಗೆ ಉನ್ನತ ಶಿಕ್ಷಣ ಇಲಾಖೆಯಿಂದ ಅಗತ್ಯವಿರುವ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಸಹಮತಿ ಮತ್ತು ಮಂಜೂರಾತಿಗೆ ಕಳುಹಿಸಲಾಗಿದ್ದಲ್ಲಿ ಈವರೆವಿಗೂ ಅನುಮೋದನೆ ನೀಡದೆ ಇರುವುದು ನಿಜವೇ (ಸಂಪೂರ್ಣ ಮಾಹಿತಿ ನೀಡುವುದು); | |
| ಇ | ಹಾಗಿದ್ದಲ್ಲಿ, ಎ.ಐ.ಸಿ.ಟಿ.ಇ ತನಿಖಾ ತಂಡ 2020-21ನೇ ಸಾಲಿನ ಶೈಕ್ಷಣಿಕ ವರ್ಷದಲ್ಲಿ ತನಿಖೆಗೆ ಬರುವ ಮುನ್ನ ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಮತ್ತು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜುಗಳಿಗೆ ವಿಭಾಗವಾರು ಬೋಧಕ/ಬೋಧಕೇತರ ಸಿಬ್ಬಂದಿ ವರ್ಗದ ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಯು ಅನುಮೋದನೆ ನೀಡಲು ಕ್ರಮವಹಿಸುವುದೇ? | |

ಸಂಖ್ಯೆ: ಆಇ 94 ವೆಚ್ಚ-8/2020

(ಬಿ. ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ಸರ್ಕಾರ

ಸಂಖ್ಯೆ:ಆಇ 31 ಇಎಲ್‌ಕ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ:16.03.2020

90
48
17/3/20

ಇಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರ್ಥಿಕ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಲಿಂಗೇಶ ಕೆ.ಎಸ್ (ಬೇಲೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1231ಕ್ಕೆ ಉತ್ತರ ಕಳುಹಿಸುವ ಕುರಿತು.

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ವಿಧಾನ ಸಭಾ ಸದಸ್ಯರಾದ ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಲಿಂಗೇಶ ಕೆ.ಎಸ್ (ಬೇಲೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1231ಕ್ಕೆ ಉತ್ತರವನ್ನು ತಯಾರಿಸಿ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

Manjula
16/3/2020
(ಮಂಜುಳಾ ನಟರಾಜ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ).

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ: | 1231 |
| ಮಾನ್ಯ ಸದಸ್ಯರ ಹೆಸರು: | ಶ್ರೀ ಲಿಂಗೇಶ್ ಕೆ.ಎಸ್. (ಬೇಲೂರು) |
| ಉತ್ತರಿಸಬೇಕಾದವರು: | ಅಬಕಾರಿ ಸಚಿವರು |
| ಉತ್ತರಿಸಬೇಕಾದ ದಿನಾಂಕ: | 17–03–2020 |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬೇಲೂರು ವಿಧಾನಸಭಾ ಕ್ಷೇತ್ರದಲ್ಲಿ ಸಿಎಲ್–2, ಸಿಎಲ್–4, ಸಿಎಲ್–7, ಸಿಎಲ್–9, ಸಿಎಲ್–11ಸಿ, ಸಿಎಲ್–14 ಮದ್ಯ ಮಾರಾಟ ಕೇಂದ್ರಗಳೆಷ್ಟು; ಹಾಗೂ ವಾರ್ಷಿಕ ವಹಿವಾಟು ಎಷ್ಟು; (ಮಾಹಿತಿ ನೀಡುವುದು)</td><td>ಬೇಲೂರು ವಿಧಾನ ಸಭಾ ಕ್ಷೇತ್ರದಲ್ಲಿ ಫೆಬ್ರವರಿ–2020ರ ಅಂತ್ಯಕ್ಕೆ ಕಾರ್ಯ ನಿರ್ವಹಿಸುತ್ತಿರುವ ಸನ್ನದುಗಳು ಈ ಕೆಳಕಂಡಂತಿರುತ್ತದೆ.<br>
<table>
<tr><th>ಕ್ರ. ಸಂ</th><th>ಸನ್ನದು ವಿಧ</th><th>ಕಾರ್ಯನಿರ್ವಹಿಸುತ್ತಿರುವ ಸನ್ನದುಗಳ ಸಂಖ್ಯೆ</th></tr>
<tr><td>1.</td><td>ಸಿಎಲ್–2</td><td>15</td></tr>
<tr><td>2.</td><td>ಸಿಎಲ್–9</td><td>9</td></tr>
<tr><td>3.</td><td>ಸಿಎಲ್–4</td><td>2</td></tr>
<tr><td>4.</td><td>ಸಿಎಲ್–7</td><td>3</td></tr>
<tr><td>5.</td><td>ಸಿಎಲ್–11ಸಿ</td><td>4</td></tr>
<tr><td>6.</td><td>ಸಿಎಲ್–14</td><td>1</td></tr>
<tr><td>7</td><td>ವೈನ್ ಟಾವರಿನ್</td><td>1</td></tr>
<tr><td>8</td><td>ಆರ್.ವಿ.ಬಿ (Retail vend of Beer)</td><td>1</td></tr>
<tr><td colspan="2">ಒಟ್ಟು</td><td>36</td></tr>
</table>
<br>ಸದರಿ ಸನ್ನದುಗಳಲ್ಲಿ ಏಪ್ರಿಲ್ 2019 ರಿಂದ ಫೆಬ್ರವರಿ 2020 ರವರೆಗೆ ವಾರ್ಷಿಕ ವಹಿವಾಟು ಒಟ್ಟು ರೂ.107,17,60,900/– ಆಗಿರುತ್ತದೆ.</td></tr>
<tr><td>ಆ)</td><td>ಸದರಿ ಮದ್ಯ ಮಾರಾಟಗಾರರು ಅನಧಿಕೃತವಾಗಿ ಗ್ರಾಮೀಣ ಭಾಗದ ಚಿಲ್ಲರೆ ಅಂಗಡಿಗಳಿಗೆ ಮದ್ಯ ಸರಬರಾಜು ಮಾಡುತ್ತಿರುವುದು ಮತ್ತು ಸದರಿ ಚಿಲ್ಲರೆ ಅಂಗಡಿಗಳು ಹೆಚ್ಚಿನ ದರಕ್ಕೆ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಂದಿದೆ.</td></tr>
</table>

| ಇ) | ಬಂದಿದ್ದಲ್ಲಿ, ಸರ್ಕಾರ ಈ ಬಗ್ಗೆ ತೆಗೆದುಕೊಂಡಿರುವ ಕ್ರಮವೇನು; ಹಾಗೂ ಈವರೆಗೆ ದಾಖಲಾಗಿರುವ ಪ್ರಕರಣಗಳೆಷ್ಟು; (ಮಾಹಿತಿ ನೀಡುವುದು) | ಇಂತಹ ಪ್ರಕರಣಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಅಬಕಾರಿ ಕಾಯ್ದೆ ಮತ್ತು ತತ್ಸಂಬಂಧ ನಿಯಮಗಳನ್ನು ಜಾರಿಗೊಳಿಸುವ ಕ್ರಮಗಳನ್ನು ಚುರುಕುಗೊಳಿಸಲಾಗಿದೆ. ಅಕ್ರಮವಾಗಿ ಮದ್ಯ ಮಾರಾಟ ಮಾಡುವವರ ವಿರುದ್ಧ ಅಬಕಾರಿ ಕಾಯ್ದೆಯ ಅಡಿಯಲ್ಲಿ ಪ್ರಕರಣಗಳನ್ನು ದಾಖಲಿಸಲಾಗುತ್ತಿದೆ. ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಎರಡು ತಿಂಗಳಿಗೊಮ್ಮೆ ನಡೆಯುವ ಸಮನ್ವಯ ಸಮಿತಿ ಸಭೆಯಲ್ಲೂ ಅಬಕಾರಿ ಅಕ್ರಮಗಳನ್ನು ತಡೆಗಟ್ಟುವ ಕುರಿತು ಅಗತ್ಯ ನಿರ್ದೇಶನಗಳನ್ನು ನೀಡಲಾಗುತ್ತಿದೆ. ಅಬಕಾರಿ ಇಲಾಖೆಯ ಸಿಬ್ಬಂದಿಯು ಸದಾ ಕಾಲ ಜಾಗೃತರಾಗಿದ್ದು ನಿರಂತರ ದಾಳಿ ಕಾರ್ಯ ನಡೆಸಿ ಅಕ್ರಮ ಮದ್ಯ ಮಾರಾಟವಾಗದಂತೆ ಎಚ್ಚರ ವಹಿಸುವಂತೆ ನಿರ್ದೇಶಿಸಲಾಗಿದೆ.<br>ಬೇಲೂರು ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ 2018–19ನೇ ಸಾಲಿನಲ್ಲಿ 98 ಮತ್ತು 2019–20 (ಜುಲೈಯಿಂದ ಫೆಬ್ರವರಿವರೆಗೆ)ನೇ ಸಾಲಿನಲ್ಲಿ 79 ಪ್ರಕರಣಗಳನ್ನು ದಾಖಲು ಮಾಡಲಾಗಿದೆ. |
|---|---|---|

16/3/20

(ಎಚ್. ನಾಗೇಶ್)
ಅಬಕಾರಿ ಸಚಿವರು

ಆಇ 31 ಇ.ಎಲ್.ಕ್ಯೂ 2020

ಕರ್ನಾಟಕ ಸರ್ಕಾರ

ಸಂಖ್ಯೆ:ಜಸಂಇ 16 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:17/03/2020.

16 Stamp 17/3/2020 10.25 AM

**ಇಂದ:**

ಸರ್ಕಾರದ ಕಾರ್ಯದರ್ಶಿಗಳು,
ಜಲಸಂಪನ್ಮೂಲ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:**- ಕರ್ನಾಟಕ ವಿಧಾನ ಸಭೆ ಮಾನ್ಯ ಸದಸ್ಯರಾದ ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ) ಇವರ ಚುಕ್ಕೆ ಗುರುತಿನ/ ಪ್ರಶ್ನೆ ಸಂಖ್ಯೆ: 345 ಕ್ಕೆ ಉತ್ತರ ಒದಗಿಸುವ ಬಗ್ಗೆ.

***

ಕರ್ನಾಟಕ ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ) ಇವರ ಚುಕ್ಕೆ ಗುರುತಿನ/ಗುರುತ್ತಿಲ್ಲ ಪ್ರಶ್ನೆ ಸಂಖ್ಯೆ: 345 ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ. .

ತಮ್ಮ ವಿಶ್ವಾಸಿ,

(ರವೀಂದ್ರ ಕೊಡ))
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-5)
ಜಲ ಸಂಪನ್ಮೂಲ ಇಲಾಖೆ

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 345
ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ)
ಉತ್ತರಿಸುವ ದಿನಾಂಕ : 17/03/2020
ಉತ್ತರಿಸುವ ಸಚಿವರು : ಜಲ ಸಂಪನ್ಮೂಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು 524.25 ಅಡಿ ಎತ್ತರಕ್ಕೇರಿಸಿದ್ದಲ್ಲಿ ಚಿಕ್ಕಪಡಸಲಗಿ ಸೇತುವೆ ಹಿನ್ನೀರಿನ ನೀರಿನಲ್ಲಿ ಮುಳುಗಡೆಯಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಆಲಮಟ್ಟಿ ಜಲಾಶಯದ ಹಿನ್ನೀರಿನಲ್ಲಿ ಈ ಮೊದಲು ನಿರ್ಮಿಸಿರುವ ಚಿಕ್ಕಪಡಸಲಗಿ ಸೇತುವೆಯು ಆಲಮಟ್ಟಿ ಜಲಾಶಯದ ನೀರಿನ ಸಂಗ್ರಹಣೆ ಮಟ್ಟ ಆರ್.ಎಲ್ 524.256 ಮೀಟರ್‌ಗೆ ಎತ್ತರಿಸಿದಾಗ, ಮುಳುಗಡೆ ಹೊಂದಲಿದೆ. ಈ ಕಾರಣದಿಂದಾಗಿ, ಪ್ರಸ್ತುತ ಚಿಕ್ಕಪಡಸಲಗಿ ಸೇತುವೆ ಮೇಲ್ಭಾಗದಲ್ಲಿ (ಕಲಬುರಗಿ–ಧಾರವಾಡ ರಸ್ತೆಯಲ್ಲಿ) ಕೃಷ್ಣಾ ನದಿಗೆ ಅಡ್ಡಲಾಗಿ, |
| ಆ | ಹಾಗಿದ್ದಲ್ಲಿ, ಈ ಸಂಬಂಧ ಹೊಸ ಸೇತುವೆ ನಿರ್ಮಿಸಲು ಕೈಗೊಂಡ ಕ್ರಮಗಳಾವುವು; (ವಿವರ ನೀಡುವುದು) | ಹೊಸ ಸೇತುವೆ ನಿರ್ಮಾಣ (ರಸ್ತೆ ಮೇಲ್ಮಟ್ಟ ಆರ್.ಎಲ್ 530.70 ಮೀ. ಗೆ ವಿನ್ಯಾಸದೊಂದಿಗೆ) ಮಾಡಲು ರೂ.99.50 ಕೋಟಿ ಅಂದಾಜು ಮೊತ್ತದ ಪ್ರಸ್ತಾವನೆ ತಯಾರಿಸಲಾಗಿರುತ್ತದೆ. |
| ಇ | ಸದರಿ ಕಾಮಗಾರಿಯು ಯಾವಾಗ ಪ್ರಾರಂಭಿಸಿ ಪೂರ್ಣಗೊಳಿಸಲು ಸರ್ಕಾರ ಉದ್ದೇಶಿಸಿದೆ; | ಸದರಿ ಪ್ರಸ್ತಾವನೆಯನ್ನು ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–3ರಡಿ ಪುನರ್‌ವಸತಿ & ಪುನರ್ ನಿರ್ಮಾಣ ಅಂಗವಾಗಿ ಪರಿಗಣಿಸಿ ಕಾಮಗಾರಿ ಕೈಗೆತ್ತಿಕೊಳ್ಳಲು ನಿಗಮದ ನಿರ್ದೇಶಕರ ಮಂಡಳಿ ಸಭೆಯಲ್ಲಿ ಮಂಡಿಸಲು ಯೋಜಿಸಲಾಗಿದೆ. |
| ಈ | ಸದರಿ ಕಾಮಗಾರಿಗೆ ತಗಲುವ ಅಂದಾಜು ವೆಚ್ಚವೆಷ್ಟು? (ವಿವರ ನೀಡುವುದು) | ಚಿಕ್ಕಪಡಸಲಗಿ ಸೇತುವೆ ನಿರ್ಮಾಣಗೊಳಿಸಲು ರೂ.99.50 ಕೋಟಿ (2016–17ನೇ ಸಾಲಿನ ದರಪಟ್ಟಿಯಂತೆ) ಅಂದಾಜು ಮೊತ್ತದ ಪ್ರಸ್ತಾವನೆ ತಯಾರಿಸಲಾಗಿರುತ್ತದೆ. |

ಸಂಖ್ಯೆ: ಜಸಂಇ 16 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 21 ಡಬ್ಲ್ಯೂಎಲ್ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:13.03.2020.

ಇವರಿಂದ:

ಸರ್ಕಾರದ ಕಾರ್ಯದರ್ಶಿಗಳು,
ಜಲ ಸಂಪನ್ಮೂಲ ಇಲಾಖೆ,
ವಿಕಾಸ ಸೌಧ,
ಬೆಂಗಳೂರು–560001.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು–560001.

15
S.Q.
17/3/20

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಸಾಲ ಜಯರಾಮ್ (ತುರುವೇಕೆರೆ) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 2194ಗೆ ಉತ್ತರ ಒದಗಿಸುವ ಬಗ್ಗೆ.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.2194/2020, ದಿ:05.03.2020.

------

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಸಾಲ ಜಯರಾಮ್ (ತುರುವೇಕೆರೆ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 2194ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ಎಸ್.ಎನ್.ಕೇಶವಪ್ರಕಾಶ್)
ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ–4)
ಜಲಸಂಪನ್ಮೂಲ ಇಲಾಖೆ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2194
2. ಸದಸ್ಯರ ಹೆಸರು : ಶ್ರೀ ಮಸಾಲ ಜಯರಾಮ್ (ತುರುವೇಕೆರೆ)
3. ಉತ್ತರಿಸಬೇಕಾದ ದಿನಾಂಕ : 17.03.2020
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಎತ್ತಿನಹೊಳೆ ನೀರಾವರಿ ಯೋಜನೆಯಡಿ ತುರುವೇಕೆರೆ ತಾಲ್ಲೂಕಿನ ಹಡವನಹಳ್ಳಿ, ಹೊನ್ನೇನಹಳ್ಳಿ ಗ್ರಾಮಗಳ 52.28 ಎಕರೆ ಕೃಷಿ ಜಮೀನನ್ನು ವಶಪಡಿಸಿಕೊಂಡಿದ್ದರೂ ಸಹ ತುರುವೇಕೆರೆ ತಾಲ್ಲೂಕಿನ ಕೆರೆ ಕಟ್ಟೆಗಳಿಗೆ ಯಾವುದೇ ನೀರು ಹಂಚಿಕೆ ಮಾಡದೇ ತುರುವೇಕೆರೆ ತಾಲ್ಲೂಕನ್ನು ಎತ್ತಿನಹೊಳೆ ಯೋಜನೆಯಿಂದ ಹೊರತು ಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಪರಿಷ್ಕೃತ ಅನುಮೋದಿತ ವಿವರವಾದ ಯೋಜನಾ ವರದಿಯಲ್ಲಿ ತುಮಕೂರು ಜಿಲ್ಲೆಯ ತುಮಕೂರು ತಾಲ್ಲೂಕಿನ ಕೋರ ಹೋಬಳಿ, ಕೊರಟಗೆರೆ, ಮಧುಗಿರಿ ಮತ್ತು ಪಾವಗಡ ತಾಲ್ಲೂಕಿನ ಕೆರೆಗಳಿಗೆ ಮಾತ್ರ ನೀರು ತುಂಬಿಸಲು ಯೋಜಿಸಲಾಗಿದೆ. ತುರುವೇಕೆರೆ ತಾಲ್ಲೂಕು ಕಾವೇರಿ ಜಲಾನಯನ ಪ್ರದೇಶದಲ್ಲಿ ಬರುವುದರಿಂದ ಹಾಗೂ ಹೇಮಾವತಿ ಯೋಜನೆಯಡಿ ತುರುವೇಕೆರೆ ತಾಲ್ಲೂಕನ್ನು ಪರಿಗಣಿಸಿರುವುದರಿಂದ ಎತ್ತಿನಹೊಳೆ ಯೋಜನೆಯಡಿ ಸದರಿ ತಾಲ್ಲೂಕಿಗೆ ನೀರು ಹಂಚಿಕೆ ಆಗಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ತುರುವೇಕೆರೆ ತಾಲ್ಲೂಕನ್ನು ಎತ್ತಿನಹೊಳೆ ಯೋಜನೆಗೆ ಸೇರ್ಪಡೆಗೊಳಿಸಿ ತಾಲ್ಲೂಕಿನ ರೈತರಿಗೆ ಸದರಿ ಯೋಜನೆಯ ನೀರಾವರಿ ಸೌಲಭ್ಯ ಒದಗಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಎತ್ತಿನಹೊಳೆ ಯೋಜನೆಯು ಸಮಗ್ರ ಕುಡಿಯುವ ನೀರಿನ ಯೋಜನೆಯಾಗಿದ್ದು, ಯಾವುದೇ ಕೃಷಿ ನೀರಾವರಿಗೆ ಯೋಜನಾ ವರದಿಯಲ್ಲಿ (DPR) ಪರಿಗಣಿಸಿರುವುದಿಲ್ಲ. ಆದುದರಿಂದ ತುರುವೇಕೆರೆ ತಾಲ್ಲೂಕಿಗೆ ಎತ್ತಿನಹೊಳೆ ಯೋಜನೆಯಿಂದ ಕೃಷಿಗೆ ನೀರಾವರಿ ಸೌಲಭ್ಯ ಒದಗಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |

**ಸಂಖ್ಯೆ: ಜಸಂಇ 21 ಡಬ್ಲ್ಯೂಎಲ್ಎ 2020**

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು
(ಬೃಹತ್ ಮತ್ತು ಮಧ್ಯಮ ನೀರಾವರಿ)

ಕರ್ನಾಟಕ ಸರ್ಕಾರ

ಸಂಖ್ಯೆ: ಕಂಇ 12 ವಿಕೋವಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ:23.03.2020

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು-560001.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನಸೌಧ.

**ಮಾನ್ಯರೇ,**

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ(ಸಕಲೇಶಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2156ಕ್ಕೆ ಉತ್ತರ ನೀಡುವ ಕುರಿತು.

******

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರಾಮಸ್ವಾಮಿ ಎ.ಟಿ. (ಅರಕಲಗೂಡು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2156ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ, ಅಗತ್ಯ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ

23/3/20

**(ಕೆ. ಆರ್. ರವಿಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ವಿಶೇಷ ಕೋಶ)
ದೂರವಾಣಿ: 080-22032691
ಇ-ಮೇಲ್: ussplcell-rev@karnataka.gov.in

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **2156** |
| ಸದಸ್ಯರ ಹೆಸರು | ಶ್ರೀ ಕುಮಾರಸ್ವಾಮಿ.ಹೆಚ್.ಕೆ (ಸಕಲೇಶಪುರ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | ( 17.03.2020 – ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಿಂದ ವರ್ಗಾವಣೆಗೊಂಡಿರುವ ಪ್ರಶ್ನೆ) |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನದಲ್ಲಿ ಹೇಮಾವತಿ/ ಯಗಚಿ/ ವಾಟೆಹೊಳೆ ಜಲಾಶಯ ನಿರ್ಮಾಣಕ್ಕಾಗಿ ಜಮೀನು ಕಳೆದುಕೊಂಡ ಸಂತ್ರಸ್ಥರಿಗೆ ಜಮೀನು ಮಂಜೂರು ಮಾಡುವ ಅಧಿಕಾರವನ್ನು ದುರ್ಬಳಕೆ ಮಾಡಿಕೊಂಡು ಭೂ ಸಂತ್ರಸ್ಥರಿಗೆ ಮೀಸಲಿರಿಸಲಾದ ಸಾವಿರಾರು ಎಕರೆ ಜಮೀನನ್ನು ಕಾನೂನು ಬಾಹಿರವಾಗಿ ನಕಲಿ ದಾಖಲಾತಿಗಳನ್ನು ಸೃಷ್ಟಿಸಿ ಹಿಂದಿನ ವಿಶೇಷ ಭೂಸ್ವಾಧೀನಾಧಿಕಾರಿಗಳು ಜಿಲ್ಲಾ ಪಂಚಾಯಿತಿಯಲ್ಲಿ ಉಪಕಾರ್ಯದರ್ಶಿ (ಆಡಳಿತ), ವಿಶೇಷ ಭೂಸ್ವಾಧೀನಾಧಿಕಾರಿ ಕಛೇರಿಯ ಅಧಿಕಾರಿಗಳು, ಸಕಲೇಶಪುರ ಉಪವಿಭಾಗಾಧಿಕಾರಿ ಕಛೇರಿಯ ಅಧಿಕಾರಿಗಳು, ಸಕಲೇಶಪುರ, ಬೇಲೂರು, ಅರಕಲಗೂಡು ಮತ್ತು ಹಾಸನದ ತಾಲ್ಲೂಕು ಕಛೇರಿಯ ಅಧಿಕಾರಿಗಳು ಭೂ ಮಾಫಿಯಾರವರೊಂದಿಗೆ ಶಾಮೀಲಾಗಿ ಸಾವಿರಾರು ಎಕರೆ ಜಮೀನುಗಳನ್ನು ತಮ್ಮ ಸಂಬಂಧಿಕರಿಗೆ ಹಾಗೂ ಭೂ ಸಂತ್ರಸ್ಥರಲ್ಲದವರಿಗೆ ಮಂಜೂರು ಮಾಡಿ, ಸರ್ಕಾರಕ್ಕೆ ಕೋಟ್ಯಾಂತರ ರೂಪಾಯಿಗಳ ನಷ್ಟವುಂಟು ಮಾಡಿರುವ ಬಗ್ಗೆ 'ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಉಪ ವಿಭಾಗಾಧಿಕಾರಿಗಳು, ಹಾಸನ ಉಪವಿಭಾಗ, ಉಪ ವಿಭಾಗಾಧಿಕಾರಿಗಳು, ಸಕಲೇಶಪುರ ಉಪವಿಭಾಗ, ವಿಶೇಷ ಭೂಸ್ವಾಧೀನಾಧಿಕಾರಿ, ಹೇಮಾವತಿ ಜಲಾಶಯ ಯೋಜನೆ, ಹಾಸನ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿ, ಎತ್ತಿನಹೊಳೆ ಜಲಾಶಯ | ಹೌದು.<br><br>ಹಾಸನ ಜಿಲ್ಲೆಯಲ್ಲಿ ಹೇಮಾವತಿ/ಯಗಚಿ/ ವಾಟೆಹೊಳೆ ಜಲಾಶಯ ಯೋಜನೆಯ ಮುಳುಗಡೆ ಸಂತ್ರಸ್ಥರಿಗೆ ಮಂಜೂರು ಮಾಡಲು ಕಾಯ್ದಿರಿಸಿರುವ ಭೂಮಿಯಲ್ಲಿ ಅಕ್ರಮವಾಗಿ ಜಮೀನು ಮಂಜೂರು ಆಗಿದೆ ಎಂದು ದೂರು ದಾಖಲು ಆಗಿರುವ ಹಿನ್ನಲೆಯಲ್ಲಿ ಪರಿಶೀಲನಾ ಸಮಿತಿಯ ಅಭಿಪ್ರಾಯವನ್ನು ಪರಿಶೀಲಿಸಲಾಗಿ ಬಹುತೇಕ ಪ್ರಕರಣಗಳಲ್ಲಿ ಅಕ್ರಮವಾಗಿ ಸೃಷ್ಟಿಕೃತ ದಾಖಲೆಯಂತೆ ಜಮೀನು ಮಂಜೂರು ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡು ಬಂದಿರುತ್ತದೆ. ಉನ್ನತ ಮಟ್ಟದ ತನಿಖೆಯನ್ನು ನಡೆಸಲು ಕ್ರಮ ಕೈಗೊಳ್ಳಬಹುದಾಗಿರುವುದರಿಂದ ಜಿಲ್ಲಾಧಿಕಾರಿ, ಹಾಸನ ಜಿಲ್ಲೆ, ಹಾಸನ ರವರ ಪತ್ರ ಸಂಖ್ಯೆ ಎಲ್.ಎನ್.ಡಿ(2)788/2016–17 ದಿನಾಂಕ 03.10.2019 ರಂದು ಸರ್ಕಾರಕ್ಕೆ ವರದಿ ಸಲ್ಲಿಸಲಾಗಿರುತ್ತದೆ.<br><br>ಜಿಲ್ಲಾಧಿಕಾರಿ ಹಾಸನ ಜಿಲ್ಲೆ ಇವರು ಸಲ್ಲಿಸಲಾದ ವರದಿಯನ್ನು ಪರಿಶೀಲಿಸಿ, ಉನ್ನತ ಮಟ್ಟದ ತನಿಖೆಯನ್ನು ಕೈಗೊಳ್ಳಲು, ಆಯುಕ್ತರು, ರಾಜ್ಯ ಪುನರ್ ವಸತಿ ಮತ್ತು ಪುನರ್ ನಿರ್ಮಾಣ ಹಾಗೂ ಪದ ನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, |

| | | |
|---|---|---|
| | ಯೋಜನೆ, ಹಾಸನ ಇವರುಗಳನ್ನೊಳಗೊಂಡ ತನಿಖಾ ಸಮಿತಿಯು ಸಮಗ್ರ ತನಿಖೆ ನಡೆಸಿ, ಸಂಪೂರ್ಣ ದಾಖಲಾತಿಗಳನ್ನು ಕ್ರೋಢಿಕರಿಸಿ ದಿನಾಂಕ: 12.09.2019ರಂದು ನೀಡಿದ್ದು, ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆದ ತನಿಖಾ ತಂಡದ ವರದಿಯನ್ನು ಮಾನ್ಯ ಜಿಲ್ಲಾಧಿಕಾರಿಗಳು ತಮ್ಮ ಪತ್ರ ಸಂಖ್ಯೆ:ಎಲ್.ಎನ್.ಡಿ(2)788/2016-17, ದಿನಾಂಕ: 03.10.2019 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ (ಭೂಮಂ) ಬಹುಮಹಡಿಗಳ ಕಟ್ಟಡ, ಬೆಂಗಳೂರು, ರವರಿಗೆ ಹಾಗೂ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಿಗೆ ಕಳುಹಿಸಿರುವುದು ನಿಜವೇ; ಮೇಲ್ಕಂಡ ಅಕ್ರಮದಲ್ಲಿ ಭಾಗಿಯಾಗಿರುವ ಅಧಿಕಾರಿಗಳೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ವ್ಯಾಪ್ತಿಗೆ ಒಳಪಡುವುದರಿಂದ ಸದರಿ ಅಧಿಕಾರಿಗಳ ವಿರುದ್ಧ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ವತಿಯಿಂದ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು). | ಕಂದಾಯ ಇಲಾಖೆ ಇವರನ್ನು ಆದೇಶ ಸಂಖ್ಯೆ: ಕಂಇ 59 ವಿಕೋವಿ 2019(ಪಿ-1) ದಿನಾಂಕ: 06.02.2020 ರನ್ವಯ ನೇಮಕ ಮಾಡಿದೆ. |
| ಆ) | ಹಾಸನದ ಜಿಲ್ಲಾಧಿಕಾರಿಗಳ ಸೂಚನೆಯ ಮೇರೆಗೆ ಹಾಸನ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಹೇಮಾವತಿ ಜಲಾಶಯ ಯೋಜನೆ, ಹಾಸನ, ಇವರು ದಿನಾಂಕ:24.10.2019 ರಂದು ಹಾಸನದ ನಗರ ಪೊಲೀಸ್ ಠಾಣೆಗೆ ದೂರು ನೀಡಿ ಸದರಿ ದೂರಿನಲ್ಲಿ ದಿನಾಂಕ:01.01.2015 ರಿಂದ ದಿನಾಂಕ: 30.11.2018 ರವರೆಗೆ ಭೂ ಸ್ವಾಧೀನಾಧಿಕಾರಿಗಳ ಕಛೇರಿಯಲ್ಲಿ ಅನಧಿಕೃತವಾಗಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಅಧಿಕಾರಿಗಳ ಸಹಿಯನ್ನು ನಕಲಿ ಮಾಡಿ ಸರ್ಕಾರಕ್ಕೆ ಮೋಸ ಮಾಡಿ ಸರ್ಕಾರದ ಸಾವಿರಾರು ಎಕರೆ ಭೂ ಸಂತ್ರಸ್ಥರ ಜಮೀನುಗಳನ್ನು ಅಕ್ರಮವಾಗಿ ಮತ್ತು ಕಾನೂನು ಬಾಹಿರವಾಗಿ 414 ಫಲಾನುಭವಿಗಳಿಗೆ ಮಂಜೂರು ಮಾಡಿರುತ್ತಾರೆ ಎಂದು ದೂರು ನೀಡಿದ್ದು, ಅದರಂತೆ ದಿನಾಂಕ: 24.10.2019 ರಂದು ಹಾಸನದ ನಗರ ಪೊಲೀಸ್ ಠಾಣೆಯ ಎಫ್.ಐ.ಆರ್. ನಂಬರ್.157/2019ರಲ್ಲಿ ಕಲಂ 465, 468, 420 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿರುವುದು ನಿಜವೇ; ಈ ಅಕ್ರಮದಲ್ಲಿ ಭಾಗಿಯಾಗಿರುವ ಅಧಿಕಾರಿಗಳೂ ಸಿಬ್ಬಂದಿ ಮತ್ತು | ಹೌದು.<br><br>ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿಯಲ್ಲಿ ಅನಧಿಕೃತವಾಗಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಅಧಿಕಾರಿಗಳ ಸಹಿಯನ್ನು ನಕಲಿ ಮಾಡಿ ಸರ್ಕಾರಕ್ಕೆ ಮೋಸ ಮಾಡಿ ಸರ್ಕಾರದ ಸಾವಿರಾರು ಎಕರೆ ಭೂ ಸಂತ್ರಸ್ಥರ ಜಮೀನುಗಳನ್ನು ಅಕ್ರಮವಾಗಿ ಮತ್ತು ಕಾನೂನು ಬಾಹಿರವಾಗಿ 414 ಫಲಾನುಭವಿಗಳಿಗೆ ಮಂಜೂರು ಮಾಡಿರುವ ಬಗ್ಗೆ ಹಾಸನ ಜಿಲ್ಲೆಯ ಹಾಸನ ನಗರ ಪೊಲೀಸ್ ಠಾಣೆಯಲ್ಲಿ ಮೊ.ನಂ.157/2019 ಕಲಂ 465, 468, 420 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿ ತನಿಖೆಯಲ್ಲಿರುತ್ತದೆ.<br><br>ಈ ಪ್ರಕರಣದಲ್ಲಿ ತನಿಖೆ ಪ್ರಗತಿಯಲ್ಲಿದ್ದು ತನಿಖೆಗೆ ಸಂಬಂಧಪಟ್ಟಂತೆ ದಿನಾಂಕ: 01.01.2015 ರಿಂದ ದಿನಾಂಕ:30.11.2018 ರವರೆಗೆ ಹೇಮಾವತಿ/ಯಗಚಿ ಜಲಾಶಯ ಯೋಜನೆ(ಪುನರ್ ವಸತಿ) ಯೋಜನೆ ಅಡಿಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಗಳು ಹೇಮಾವತಿ ಜಲಾಶಯ ಯೋಜನೆ (ಪುನರ್ |

| | | |
|---|---|---|
| | ಆಡಳಿತ ಸುಧಾರಣಾ ಇಲಾಖೆ ವ್ಯಾಪ್ತಿಗೆ ಒಳಪಡುವುದರಿಂದ ಸದರಿ ಅಧಿಕಾರಿಗಳ ವಿರುದ್ಧ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ವತಿಯಿಂದ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು); | ವಸತಿ) ರವರು ಅಧಿಕೃತ ಜ್ಞಾಪನದೊಂದಿಗೆ ಮಂಜೂರು ಮಾಡಿರುವ ವಿಶೇಷ ಭೂ ಸ್ವಾಧೀನಾಧಿಕಾರಿಗಳ ಕಛೇರಿಯಲ್ಲಿ ಲಭ್ಯವಿರುವ 569 ಕಡತಗಳು ಮತ್ತು ಆಲೂರು, ಹಾಸನ, ಅರಕಲಗೂಡು, ಬೇಲೂರು, ಸಕಲೇಶಪುರ, ಹೊಳೆನರಸೀಪುರ ಮತ್ತು ಸೋಮವಾರಪೇಟೆ ತಾಲ್ಲೂಕುಗಳಿಗೆ ಸಂಬಂಧಪಟ್ಟಂತೆ ಒಟ್ಟು 910 ಕಡತಗಳಿದ್ದು, ಈ ಕಡತಗಳನ್ನು ಮುಂದಿನ ತನಿಖೆಗಾಗಿ ಅಮಾನತ್ತು ಪಡಿಸಿಕೊಳ್ಳುವ ಪ್ರಕ್ರಿಯೆ ಪ್ರಗತಿಯಲ್ಲಿದೆ. ಈ ತಿಂಗಳ ಅಂತ್ಯಕ್ಕೆ ಈ ಎಲ್ಲಾ ಕಡತಗಳನ್ನು ಅಮಾನತ್ತು ಪಡಿಸಿಕೊಳ್ಳುವ ಪ್ರಕ್ರಿಯೆ ಪೂರ್ಣಗೊಳ್ಳಲಿದೆ. ಫಿರ್ಯಾದುದಾರರು ತಮ್ಮ ದೂರಿನಲ್ಲಿ ಯಾರನ್ನೂ ಆರೋಪಿಗಳಾಗಿ ಮಾಡಿರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಹಾಸನದ ಭೂಸ್ವಾಧೀನಾಧಿಕಾರಿಗಳ ಕಛೇರಿಯಲ್ಲಿ ಅನಧಿಕೃತವಾಗಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಅಧಿಕಾರಿಗಳ ಸಹಿಯನ್ನು ನಕಲಿ ಮಾಡಿ ಸರ್ಕಾರಕ್ಕೆ ಮೋಸ ಮಾಡಿ ಸರ್ಕಾರ ಸಾವಿರಾರು ಎಕರೆ ಭೂ ಸಂತ್ರಸ್ಥರ ಜಮೀನುಗಳನ್ನು ಅಕ್ರಮವಾಗಿ ಮತ್ತು ಕಾನೂನು ಬಾಹಿರವಾಗಿ ಹಂಚಿಕೆ ಮಾಡಿರುವ ಅಧಿಕಾರಿಗಳ ವಿರುದ್ಧ ಹಾಸನದ ನಗರ ಪೊಲೀಸ್ ಠಾಣೆಯಲ್ಲಿ ಎಫ್.ಐ.ಆರ್. ದಾಖಲಿಸುವ ಬಗ್ಗೆ ಗೃಹ ಇಲಾಖೆಯಿಂದ ಕೈಗೊಂಡ ಕ್ರಮಗಳೇನು (ಸಂಪೂರ್ಣ ಮಾಹಿತಿ ನೀಡುವುದು)? | ಪೂರ್ಣ ಪ್ರಮಾಣದಲ್ಲಿ ಕಡತಗಳನ್ನು ಕ್ರಮಬದ್ಧವಾಗಿ ಪರಿಶೀಲಿಸಿದ ನಂತರ ದಾಖಲಾತಿಗಳ ಸಾಕ್ಷ್ಯಾಧಾರಗಳಿಂದ ಆರೋಪಿತರು ಯಾರೆಂಬುದು ತನಿಖೆಯಿಂದ ಹೊರಹೊಮ್ಮಬೇಕಾಗಿದೆ. ಪ್ರಕರಣದ ತನಿಖೆಯು ಪ್ರಗತಿಯಲ್ಲಿರುತ್ತದೆ. |

ಸಂಖ್ಯೆ: ಕಂಇ 12 ವಿಕೋವಿ 2020

(ಆರ್. ಅಶೋಕ)
ಕಂದಾಯ ಸಚಿವರು.

ಕರ್ನಾಟಕ ಸರ್ಕಾರ

ಸಂ: ಸಿಐ 44 ಸಿಎಂಪಿ 2020 (ಇ)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 23.03.2020

ಇವರಿಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

(11) U.S.
17/3/2020

ಇವರಿಗೆ:

ಕಾರ್ಯದರ್ಶಿ,
ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು 560 001.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಐಹೋಳೆ.ಡಿ ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1466ಕ್ಕೆ ಉತ್ತರಿಸುವ ಕುರಿತು

---

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಐಹೋಳೆ.ಡಿ ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1466ಕ್ಕೆ ಸಂಬಂಧಿಸಿದ ಉತ್ತರಗಳ ಕನ್ನಡ ಭಾಷೆಯ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಆರ್. ಮಂಜುಳ)
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಿ&ಸಿ).

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1466 |
| ಸದಸ್ಯರ ಹೆಸರು | : ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ) |
| ಉತ್ತರಿಸಬೇಕಾದ ದಿನಾಂಕ | : 17.03.2020 |
| ಉತ್ತರಿಸುವ ಸಚಿವರು | : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಈವರೆಗೆ ಮದ್ಯ ಮಾರಾಟ ಮಾಡುವ ಎಷ್ಟು MSIL ಮಳಿಗೆಗಳನ್ನು ಮಂಜೂರು ಮಾಡಲಾಗಿದೆ; (ಜಿಲ್ಲಾವಾರು ವಿವರ ನೀಡುವುದು) | ಈವರೆಗೆ ಒಟ್ಟು 865 ಮಳಿಗೆಗಳನ್ನು ಮಂಜೂರು ಮಾಡಲಾಗಿದೆ.<br>ಜಿಲ್ಲಾವಾರು ವಿವರಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ. |
| (ಆ) | ಈ ಮಳಿಗೆಗಳ ಮಂಜೂರಾತಿ ಕೋರಿ ಈವರೆವಿಗೆ ಸಲ್ಲಿಕೆಯಾಗಿರುವ ಅರ್ಜಿಗಳೆಷ್ಟು; (ಅರ್ಜಿದಾರರ ವಿವರ ಒದಗಿಸುವುದು) | ಈವರೆಗೆ 935 ಅರ್ಜಿಗಳನ್ನು ಸಲ್ಲಿಸಲಾಗಿರುತ್ತದೆ. ಅರ್ಜಿದಾರರು ಎಂ.ಎಸ್.ಐ.ಎಲ್ ಸಂಸ್ಥೆಯೇ ಆಗಿರುತ್ತದೆ. |
| (ಇ) | ಈ ಮಳಿಗೆಗಳನ್ನು ಮಂಜೂರು ಮಾಡಲು ಸರ್ಕಾರ ಅನುಸರಿಸುವ ಮಾನದಂಡಗಳಾವುವು? (ಸಂಪೂರ್ಣ ಮಾಹಿತಿ ಒದಗಿಸುವುದು) | ಅಬಕಾರಿ ಕಾಯ್ದೆ 1967ರ ಸಾಮಾನ್ಯ ಷರತ್ತುಗಳು ನಿಯಮ (5)ರಡಿಯಲ್ಲಿ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ.<br>1. ಎಂ.ಎಸ್.ಐ.ಎಲ್ ಸಂಸ್ಥೆಯೇ ತನ್ನ ವಾಣಿಜ್ಯ ಕಾರ್ಯಸಾಧ್ಯತೆಗೆ ಅನುಗುಣವಾಗಿ ಸನ್ನದುಗಳ ಸ್ಥಳವನ್ನು ನಿಗಧಿಗೊಳಿಸುವುದು. ಎಂ.ಎಸ್.ಐ.ಎಲ್ ಸಂಸ್ಥೆಯ ಅಧಿಕಾರಿಗಳು ಕರ್ನಾಟಕ ಅಬಕಾರಿ ಕಾಯ್ದೆಯನ್ವಯ ಮದ್ಯದಂಗಡಿಗಳನ್ನು ತೆರೆಯುವ ನಿರ್ದಿಷ್ಟ ಸ್ಥಳಗಳನ್ನು ಗುರುತಿಸುವುದು.<br>2. ಈ ರೀತಿ ಗುರುತಿಸುವ ಸ್ಥಳಗಳು ಸರ್ಕಾರವು ತಿಳಿಸಿರುವ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲೇ ಇರಬೇಕು ಹಾಗೂ ನಿಗಧಿಪಡಿಸಿರುವ ಸಂಖ್ಯೆಯ ಮಿತಿಯಲ್ಲೇ ಇರಬೇಕು.<br>3. ಒಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಿಂದ ಮತ್ತೊಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ವರ್ಗಾವಣೆ ಆಗದಂತೆ ನೋಡಿಕೊಳ್ಳತಕ್ಕದ್ದು.<br>4. ಎಂ.ಎಸ್.ಐ.ಎಲ್ ಸಂಸ್ಥೆಯಿಂದ ಸನ್ನದು ಸ್ಥಳಗಳನ್ನು ಗುರುತಿಸಿ ಅಬಕಾರಿ ಇಲಾಖೆಗೆ ಸಲ್ಲಿಸಿದ ನಂತರ ಅಂತಹ ಸನ್ನದು ಸ್ಥಳಗಳು ಮೇಲ್ಕಂಡ ನಿಯಮಗಳನ್ವಯ ಆಕ್ಷೇಪಣಾ ರಹಿತ ಸ್ಥಳದಲ್ಲಿರುವಂತೆ ಹಾಗೂ ಇತರೇ ಸಂಬಂಧಿಸಿದ ನಿಯಮಗಳಿಗೆ ಪೂರಕವಾಗಿರುವುದನ್ನು ಸಂಬಂಧಪಟ್ಟ ಅಬಕಾರಿ ಉಪ ಆಯುಕ್ತರು ಖಚಿತಪಡಿಸಿಕೊಳ್ಳತಕ್ಕದ್ದು. |

ಸಿಐ 44 ಸಿಎಂಐ 2020 (ಇ)

(ಜಗದೀಶ ಶೆಟ್ಟರ),
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು.

